# ಮಿಂಚು

ಅ. ನ. ಕೃಷ್ಣರಾಯ.

ಶ್ರೀನಿವಾಸ ಮುದ್ರಣಾಲಯ.
ಚಿಕ್ಕಪೇಟೆ, ಬೆಂಗಳೂರು ಸಿಟಿ.
೧೯೩೦.

## ಲೇಖಕರ ಇತರ ಗ್ರಂಥಗಳು.

---

೧೨—ಹನ್ನೆರಡು ಹೊಸ ಕಥೆಗಳು.

ಮದುವೆಯೋ-ಮನೆಹಾಳೊ — ನಾಟಕ

ಆಹುತಿ — ವಿಷಾದಾಂತ ನಾಟಕ

ಸೂತಪುತ್ರ ಕರ್ಣ — ನಾಟಕ

ೀ ಕೃಷ್ಣ — ನಾಟಕ

ಯೋಷಿ — ಐತಿಹಾಸಿಕ ನಾಟಕ

ಸೂಳೆ — ಸಾಮಾಜಿಕ ನಾಟಕ

ಕಬೀರ್ — ಐತಿಹಾಸಿಕ ನಾಟಕ

ನಾಟಕವೆಂದರೇನು ? ನ್ಯಾಸಗಳು

— ಮೊದಲಾದುವು.

**ಅಚ್ಚಿನಲ್ಲಿವೆ.**

# ಮುನ್ನುಡಿ

ನಾನು ಆಗಿಂದಾಗ್ಗೆ ಬರೆದ ಸಣ್ಣ ಕಥೆಗಳನ್ನು ಒಂದುಗೂಡಿಸಿ ಪುಸ್ತಕ ರೂಪವಾಗಿ ಪ್ರಕಟಿಸಬೇಕೆಂಬ ಆಸೆಯು ಕೆಲವರ್ಷಗಳ ಹಿಂದೆ ಹುಟ್ಟಿತು. ಅದೂ ನಾನು "ಮುಂದೇನು ಗತಿ" ಯೆಂಬ ಕಥೆಯನ್ನು ಬರೆದಾಗ. ಆ ಕಥೆಯು ಕೆಲವು ನಡೆದ ಘಟನೆಗಳ ಮೇಲಿನ ರಚನೆಯಾಗಿದೆಯಾದ್ದರಿಂದ ನನ್ನ ನಾಯಕನನ್ನರಿತಿದ್ದ ಕೆಲವರು ಅಂತಹ ಕಥೆಗಳು ಹೆಚ್ಚು ಜನಗಳ ಗಮನಕ್ಕೆ ಬಂದರೆ ಪ್ರಯೋಜನವಾದೀತೆಂದು ನನಗೆ ಸೂಚಿಸಿದರು. ಆದರೆ ಅಗ್ಗದ ಮುದ್ರಣ, ಅಗ್ಗದ ಪ್ರಕಾಶನಗಳ ಈ ಕಾಲದ ಸಾಹಿತ್ಯಕಿರುತಾರಗೆಗಳಲ್ಲಿ ಇದೂ ಒಂದೆಂದು, ಯಾರಸೇವೆಗೆ ನಾನು ಪುಸ್ತಕವನ್ನು ಪ್ರಕಟಿಸಬೇಕೆಂದಿದ್ದೆನೋ ಅವರು ಬಗೆದಾರೆಂದು ಶಂಕಿಸಿ ವಿಳಂಬಮಾಡುತ್ತಲೇ ಒಂದೆರಡು ವರ್ಷ ಸುಮ್ಮನಿದ್ದೆ. ಆದರೆ ಸುಹೃದಯರಾದ, ಶ್ರೀನಿವಾಸ ಮುದ್ರಣಾಲಯದ ಯಜಮಾನರಾದ ಶ್ರೀಯುತ ವೆಂಕಟರಾಮಯ್ಯನವರು ನನ್ನ ಗ್ರಂಥಗಳಲ್ಲಿ ಯಾವದಾದರೊಂದನ್ನು ಪ್ರಕಟಿಸಲೇ ಬಿಡಬೇಕೆಂದು ಹಟ್ಟತೊಟ್ಟ ಪ್ರಯುಕ್ತ ಈ ಗ್ರಂಥವನ್ನು ನಾನು ಹೊರಗೆ ತೆಗೆಯಬೇಕಾಗಿಯೂ, ಅದು ಅಚ್ಚಾಗಿ ಪುಸ್ತಕರೂಪವನ್ನು ತಾಳಬೇಕಾಗಿಯೂ ಬಂದಿತು. ಇದಕ್ಕೆ ಯಾರು ಯಾರಿಗೆ ಕೃತಜ್ಞರಾಗಿರಬೇಕೋ ಸಾಂಪ್ರದಾಯಿಕ ವರ್ತನೆಗಳನ್ನರಿಯದ ನಾನು ತಿಳಿಯದವನಾಗಿರುವೆ.

ಈಗಿನ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಬಳಕೆಯಾಗಿರುವ ಕಥೆಗಳಿಗೂ ನನ್ನ ಕಥೆಗಳಿಗೂ ವಿಶೇಷ ಅಂತರವುಂಟು. ಅವುಗಳಲ್ಲಿ ಕೆಲವನ್ನು ನಾನು ಇಲ್ಲಿ ಸೂಚಿಸಬೇಕೆಂದಿರುವುದು ಆತ್ಮ ಪ್ರಶಂಸೆಯನ್ನು ಮಾಡಿಕೊಳ್ಳಬೇಕೆಂದಾಗಲೀ, ಇತರ ಕಥೆಗಾರರನ್ನು ಹಳಿಯಬೇಕೆಂದಾಗಲೀ ಅಲ್ಲ. ವಿಚಿತ್ರ ವಿಮರ್ಶ ಪದ್ಧತಿಯು ಬೆಳೆಯುತ್ತಿರುವ ಕರ್ಣಾಟಕದಲ್ಲಿ ಗ್ರಂಥಕರ್ತೃಗಳು ಜಾರ್ಜ್ ಬರ್ನಾರ್ಡ್ ಷಾಯವರಂತೆ ಪ್ರಲಂಬ ಮುನ್ನುಡಿಗಳನ್ನು ಬರೆದು,

ತಮ್ಮ ಗ್ರಂಥಗಳನ್ನು ವಿಮರ್ಶಿಸುವ ಬಗೆಯನ್ನೂ ಬೋಧಿಸಬೇಕಾಗಿದೆ. ಇಲ್ಲವಾದರೆ ವಿಮರ್ಶಕರು ಅಪಾರ್ಥಗಳನ್ನು ಕಲ್ಪಿಸಿಕೊಂಡು ಓದುಗರನ್ನು ಅಡ್ಡಹಾದಿಗೆಳೆಯದಂತೆ ತಮ್ಮ ಉದ್ದಿಶ್ಯಗಳನ್ನಾದರೂ ಸ್ಪಷ್ಟವಾಗಿ ಬಿಚ್ಚಿ ಹೇಳಬೇಕಾಗುತ್ತದೆ. ವಿಮರ್ಶಕನು ನೈಜವಾಗಿಯೂ ಸತ್ಯಾರ್ಥಪ್ರಕಾಶಕ್ಕೆ ಹೊರಟಿದ್ದಲ್ಲಿ ಮ್ಯಾಥ್ಯೂ ಆರ್ನಾಲ್ಡ್‌ಯವರು ಹೇಳುವಂತೆ, ತನ್ನ ಹೃದಯಕ್ಕೊಪ್ಪಿದ ಬರಹಗಾರನ ಸಾಹಿತ್ಯದಲ್ಲಿ ಜನರು ಹೆಚ್ಚು ಆಸಕ್ತಿಯನ್ನು ತೆಗೆದುಕೊಳ್ಳುವಂತೆ, ಅವುಗಳು ಜನತೆಯ ಕಂಗಳಿಗೆ ಚೆನ್ನಾಗಿ ಬೀಳುವಂತೆ ಮಾಡಬೇಕಾಗುತ್ತದೆ. (Surely the critic who does most for his author is the critic who gains readers for his author himself. Not for any lucubrations on his author ;— gains more readers for him, and enables those readers to read him with more admiration) ಇಲ್ಲವೆ ಗ್ರಂಥವು ಜನತೆಯ ನೈತಿಕ, ಮಾನಸಿಕ ಹಾಗೂ ಸಾಮಾಜಿಕ ಪ್ರಗತಿಗೆ ಅಡ್ಡಿಬರುತ್ತದೆಂದಾಗಲೀ, ಕೆಡಿಸುತ್ತದೆಂದಾಗಲೀ ದೃಢಪಟ್ಟಲ್ಲಿ ಅದನ್ನು ಮಾರಿಕೋಪದ್ರವದಂತೆ ಕಂಡು, ನಿರ್ಮೂಲಮಾಡಲು ಹೊರಡಬೇಕಾಗುತ್ತದೆ ಕಲಾವಿದನು ಹೇಗೆ ಜನಸಾಮಾನ್ಯದ ಕಂಗಳಿಗೆ ಬೀಳದೆ ತನ್ನ ಕಂಗಳಿಗೆ ಮಾತ್ರ ಬಿದ್ದಿರುವ ಸುಂದರ ವಿಚಾರಗಳನ್ನು ಅವರುಗಳಿಗೆ ತಿಳಿಸಲು ಮುಂದುವರಿಯುತ್ತಾನೋ ವಿಮರ್ಶಕನೂ ಹಾಗೆಯೇ ರಚನಾತ್ಮಕವಾಗಿ ಮುಂದುವರಿಯುತ್ತಾನೆ.

ಈ ಎರಡು ದೃಷ್ಟಿಗಳಿಂದಲೂ ಈ ನನ್ನ ಕಥಾಸಂಚಯನವು ಕನ್ನಡ ಸಾಹಿತ್ಯಕ್ಕೆ ಯಾವ ವಿಧದಿಂದಲಾದರೂ ಕಳೆಯನ್ನು ಹೆಚ್ಚಿಸಿದೆಯೇ, ಹೊಸದಾಗಿ ಏನಾದರೂ ಜೀವವನ್ನಿತ್ತಿದೆಯೇ ಎಂದು ಪೃಥಕ್ಕರಿಸಿ ಗ್ರಂಥದಗುಣಾವಗುಣಗಳಿಗನುಗುಣವಾದ ಪುರಸ್ಕಾರತಿರಸ್ಕಾರಗಳನ್ನಿತ್ತರೆ ನಾನು ನಲಿವೆನು. ಹಾಗಲ್ಲದೆ ನನ್ನ ಭಾವನೆಗಳು ತಮಗೊಪ್ಪದೆಂದೂ, ತಮಗೆ ನಾಟಕವು ರುಚಿಸುವಲ್ಲಿ ನಾನು ಕಥೆಬರೆದೆನೆಂದೂ, ನನ್ನ "ವಯೋಮರ್ಯಾದೆ-ಧರ್ಮ"ಗಳಿಗೆ ವಿರುದ್ಧವಾಗಿ ಆಚರಿಸಿದೆನೆಂದೂ ಗ್ರಂಥವನ್ನು ಹಳಿಯುವದಾದರೆ, ನನ್ನ ಶಕ್ತಿಯನ್ನು ಉಡುಗಿಸಿ ಈ ಬಗೆಯ ಗ್ರಂಥಗಳಿಗೆ ತಡೆಕಟ್ಟಬೇ

ಕೆಂದು ಹೊರಟಲ್ಲಿ ಅವರು ಅನೈಚ್ಛಿಕವಾಗಿ ನನಗೆ ಹೊಸ ಸ್ಫೂರ್ತಿಯನ್ನು ಕೊಟ್ಟು, ಇಂತಹವೇ ಗ್ರಂಥಗಳು ಹೆಚ್ಚುಹೆಚ್ಚು ಬರಲು ಪ್ರೋತ್ಸಾಹ ಮಾಡಿದಂತಾಗುವುದು ಮಾತ್ರವಲ್ಲದೆ ಯಾವ ನಾಡಿನ-ನಾಡನುಡಿಯ ಸೇವೆಯನ್ನು ಒಮ್ಮನಸ್ಸಿನಿಂದ, ಒಂದೇ ಬಗೆಯ ಪರಿಶುದ್ಧಾತ್ಮದಿಂದ ನಾವೆಲ್ಲರೂ ಮಾಡ ಹೊರಟಿರುವೆವೋ ಆದಕ್ಕೆ ಪರಿವಾದವನ್ನೆಸಗಿದಂತಾಗುತ್ತದೆ. ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ಹೇಳುವಂತೆ ನಮ್ಮ ಮನಸ್ಸನ್ನು ತಾಯಿಯ (ನುಡಿರಮಣಿಯ) ಗುಡಿಸಲೆಂದು ಭಾವಿಸಿ, ಅದನ್ನು ಪರಿಶುದ್ಧವಾದ ಅಂತಃಕರಣ, ನಿರ್ಮಲವಾದ ಭಾವನೆಗಳಿಂದ. ಅಲಂಕರಿಸಿಡೋಣ. ಆಕೆಯು ಕೃಪೆಮಾಡಿ ಒಂದು ಅರಘಳಿಗೆ ನಮ್ಮ ಬಡಕುಟೀರದಲ್ಲಿ ಪವಡಿಸಿದರೆ ನಮ್ಮ ಭಾಗ್ಯ ಬೆಳೆಯುವುದು, ಕೀರ್ತಿಯು ಕಸ್ತೂರಿಯ ಸುಗಂಧದಂತೆ ಹರಡುವುದು.

ಪಾಮರನಾದ ನನ್ನಿಂದ ಹೆಚ್ಚಿನ ಸೇವೆಯಾಗದಿದ್ದರೆ ಚಿಂತೆಯಿಲ್ಲ. ಲೋಕದಲ್ಲಿ ನನ್ನ ಸ್ಥಾನವನ್ನೂ, ಲೋಗರಲ್ಲಿ ನನ್ನ ಅಂತಸ್ತನ್ನೂ ಚೆನ್ನಾಗಿ ಗೊತ್ತುಮಾಡಿಕೊಂಡಿದ್ದೇನೆ. ನನ್ನ ಬರವಣಿಗೆಗಳಲ್ಲಿ ಜೀವವಿದ್ದಲ್ಲಿ, ಸತ್ಯಸತ್ವಗಳಿದ್ದಲ್ಲಿ ಫಿಟ್ಜ಼ರಾಲ್ಡರ "ಉಮರನ ಒಸಗೆ"ಯನ್ನು ಹೊರಗೆಳೆದಂತಹ ರೋಸೆಟಿಗಳು ಇಂದಲ್ಲ ಮುಂದೆಯಾದರೂ ಬಂದೇಬರುವರು. ನನ್ನಿಂದ ನಾಡಿಗೆ ಸೇವೆಯಾಗದಿದ್ದರೆ ಹಲುಬೆನು-ಆದರೆ ಹಾನಿಯಾದರೆ ದುಃಖದುರಿಯಲ್ಲಿ ಬೇಯುವೆನು.

ಈ ಸಂಗ್ರಹದಲ್ಲಿರುವ ೯ ಕಥೆಗಳಲ್ಲಿ "ಅವಳ ಬಾಳು" ಎಂಬುದೊಂದನ್ನುಳಿದು ಮಿಕ್ಕೆಲ್ಲ ಕಥೆಗಳೂ ಮಾಸಪತ್ರಿಕೆಗಳಲ್ಲಿ ಆಗಿಂದಾಗ್ಗೆ ಪ್ರಕಟವಾದವು. "ನನ್ನ ಮುದ್ದುಸರೋಜ"(೧೯೨೮)"೯|| ಘಂಟೆ" (೧೯೩೦) "ಕಂದ" (೧೯೨೬) ಈ ಮೂರು ಕಥೆಗಳು "ಜಯಕರ್ಣಾಟಕ"ದಲ್ಲಿಯೂ, "ಶ್ರೀಪತಿ ಕಲ್ಯಾಣ"(೧೯೨೯)'ರಾಷ್ಟ್ರಬಂಧು'ವಿನ ಯುಗಾದಿ ಕಾಣಿಕೆಯಲ್ಲಿಯೂ, "ಪುನರುಜ್ಜೀವನ"(೧೯೨೯)"ಪರಿಣಾಮ" (೧೯೨೭) ಕಥೆಗಳು ಸರಸ್ವತಿ ಪತ್ರಿಕೆಯಲ್ಲಿಯೂ, "ಮುಂದೇನುಗತಿ"(೧೯೨೮) ಎಂಬುದು "ಸಮಾಜವೋ ಶೂಲವೋ" ಎಂಬ ಹೆಸರಿನಿಂದ ಪ್ರೇಮದಲ್ಲಿಯೂ "ಸಾವಿತ್ರಿಯ ಸೌಭಾಗ್ಯ"ವು ,ಕಥಾಂಜಲಿ"ಯಲ್ಲಿಯೂ ಪ್ರಕಟವಾದುವು. ಅವುಗಳಿಗೆ ತಮ್ಮ ಪತ್ರಿಕೆಗಳಲ್ಲಿ ಎಡೆಕೊಟ್ಟ ಸಂಪಾದಕ, ಸಂಪಾದಕಿಯರಿಗೆ ತುಂಬಾ ಋಣಿಯಾಗಿದ್ದೇನೆ.

ಈ ನನ್ನ ಕಥೆಗಳಲ್ಲಿ ಅನೇಕವು ಸೌಖ್ಯದಲ್ಲಿ ಮುಕ್ತಾಯವಾಗುವುದಿಲ್ಲ. ನಲ್ಲನ ನಳಿತೋಳ್ಗಳ ಮೇಲೆ ನಲ್ಲೆಯು ಮಲಗಿ ಇಂಚರದಲ್ಲಿ ಮಧುರ ಗೀತೆಯನ್ನು ಹಾಡುತ್ತಿರುವುದೇ ಲೋಕವಲ್ಲ, ಅಥವ ಪಾರ್ಶಿಯಾ ದೇಶಿಯರು ಗಣಿಸಿದ್ದಂತೆ ಸಂಗೀತದ ಸೌಖ್ಯದಲ್ಲಿ ಮೈಮರೆತು,

"ಹಾ! ತುಂಬುಬಟ್ಟಲನು, ಕಾಲವದು ತಾಂನುಣ್ಚೆ
ಕೈಗೆ ದೊರೆಯದೆ ಪರಿವ ಪರಿಯ ವಿವರಿಸಲೇಂ?
ನಿನ್ನೆ ಸತ್ತಿಹುದಿನ್ನು ನಾಳೆ ಹುಟ್ಟದೆಯಿಹುದು;
ಇಂದು ಸೊಗವಿರಲವನು ನೆನೆದಳುವುದೇಕೆ?"

ಎಂದಿರಲೂ ಸಾಧ್ಯವಿಲ್ಲ. ಜೀವನದಲ್ಲಿ ಹಿತವಾದ ಹೊಂಬಣ್ಣದ ಮಿಂಚೊಮ್ಮೆ ಹೊಳೆಯಿತೆಂದರೆ, ಹಿಂದೆಯೇ ಘೋರ ವೃಷ್ಟಿಯು ಸಿದ್ಧವಾಗಿರುತ್ತದೆ. ಸುಖದುಃಖಗಳೆರಡು ಉದ್ದಿಷ್ಟ ಗುರಿಯನ್ನು ಮುಟ್ಟಲು ಓಡುತ್ತಿರುವ ಇಬ್ಬರು ತೀವ್ರಗಾಮಿಗಳಂತೆ ಪಂಥದಿಂದೋಡುತ್ತಿರುತ್ತವೆ. ಮನುಷ್ಯನು ವೇಗದ ಹುಚ್ಚಿನಲ್ಲಿ ಮೈಮರೆತಿರುವ ಇವರೆದುರು ಬರುವ ಬಡವ್ಯಕ್ತಿ, ಯಾರನ್ನು ಎದುರಿಸಿ, ತಡೆಗಟ್ಟಬಲ್ಲೆನೋ, ಅವರೆದುರಾಳಿಗಳ ಕೆಲಸವನ್ನವನು ಸುಸೂತ್ರ ಮಾಡಿಕೊಟ್ಟಂತಾಗುತ್ತದೆ. ಸುಖವನ್ನರಸುವುದೂ, ದೊರೆತಲ್ಪಸುಖದಲ್ಲಿಯೇ ತನ್ನಿರಿವನ್ನು ಮರೆವುದೂ ಸಮಾಜದ ಹುಟ್ಟುಗುಣವಾಗುತ್ತಲಿದೆ. ಸಮಾಜದ ಕಟ್ಟುಸಡಲಿ, ಅದರ ಚೈತನ್ಯವು ಚಿಕ್ಕಚಿಕ್ಕ ಕಾಲುವೆಗಳಾಗಿ ವ್ಯಕ್ತಿಗಳಲ್ಲಿ ಅಡಕವಾಗುತ್ತದೆ. ಸಮಾಜವು ಸತ್ಯ ಧರ್ಮ, ಪ್ರೇಮಗಳೆಂಬ ಸೂತ್ರಗಳನ್ನನುಸರಿಸುವುದನ್ನು ಬಿಟ್ಟು, ವ್ಯಕ್ತಿಗಳ ಬೋಧನೆಯನ್ನೂ, ಅವರ ನಡೆವಳಿಕೆಗಳ ಅನುಕರಣವನ್ನು ಮಾಡಹೊರಟಿದೆ. ದೀನರ, ಆರ್ತರ ಅಂಡಲೆಗಳು, ಅವರಿಗೆ, ಸುಖಸ್ವರ್ಗದಲ್ಲಿರುವವರ ಸಹಾಯವನ್ನು ದೊರಕಿಸುವುದರ ಬದಲು, ನೀತಿ, ಧರ್ಮ, ಆಚರಣೆಗಳೆಂಬ ಹೆಸರಿನಿಂದ "ಇಕ್ಕಲಾರದಕ್ಕೆ ಯಂಜಲು, ಹೋಗೋ ದಾಸಯ್ಯ"ಎಂಬಂತೆ ಅವರನ್ನು ವಂಚಿಸುತ್ತಲಿದೆ. ಇವುಗಳನ್ನೂ, ನಮ್ಮ ಸಮಾಜದಲ್ಲಿ ರಣಲೀಲೆಯನ್ನಾಡುತ್ತಿರುವ ಈಕ್ರೌರ್ಯದ ಕಾಳನೃತ್ಯವನ್ನೂ ನೋಡಿ ನೋಡಿ ಬೆಂದ ನನ್ನ ಹೃದಯದ ಭಾವನೆಗಳನ್ನು ಈ ಕಥೆಗಳ ಮೂಲಕ ಹೊರಗೆಡವಿದ್ದೇನೆ. ದೀನರ, ವಾಣಿ ನಾನಾಗಬೇಕೆಂದು ಇವುಗಳನ್ನು ಬರೆದಿದ್ದೇನೆ. ನನ್ನ

ಅಲ್ಪ ಶಕ್ತಿಯು ಆ ನನ್ನ ಅಕ್ಕ ತಂಗಿಯರ, ಅಣ್ಣತಮ್ಮಂದಿರಿಗೆ ಎಷ್ಟು ಸಂತಸವನ್ನೀಯುವುದೋ, ಅವರನ್ನು ದುಃಖಾಗ್ನಿಯಲ್ಲಿ ಬಾಡಿಸುವ ಸಮಾಜದ ಹೃದಯದಲ್ಲಿ ಪ್ರೇಮ ವೃಕ್ಷವನ್ನು ನೆಡಲೆಷ್ಟು ಸಾಮರ್ಥ್ಯವನ್ನು ತೋರುವುದೋ ಹೇಳಲಾರೆ—ಆದರೆ ದುಃಖಿಗಳೊಂದಿಗೆ ದುಃಖಿಸಿ ನನ್ನ ಆತ್ಮವು ಮುಂದೆ ಅಡಿಯಿಟ್ಟಿದೆ. ಆಸ್ಕರ್ ವೈಲ್ಡನ ಅನುಭವದಂತೆ ಜಗತ್ತಿನ ಸೌಂದರ್ಯವನ್ನು ಗ್ರಹಿಸಿ ಅದರ ದುಃಖದಲ್ಲಿ ಭಾಗಿಯಾಗಿ, ಅವುಗಳ ಆಚ್ಚರಿಯನ್ನು ಗ್ರಹಿಸುವುದರ ಮೂಲಕ ದೈವಿಕವಸ್ತುಗಳ ಸಂಬಂಧವೂ, ದೇವದೇವನ ಗುಟ್ಟಿಬಳಿಗೆ ಸಾರುವ ಸುಯೋಗವೂ ಒದಗಿತೆಂದು ಹಿಗ್ಗುತ್ತ ಹಿಗ್ಗುತ್ತ ಹೇಳಬಲ್ಲೆನು. ( ...and he who can look at the lovelines of the world, and share its sorrow and realise something of the worder of both, is in immediate contact with divine things, and has got as near to God's secret as any one can get—"Oscar wilde" in "De profoundis") ಹಿಮಾಲಯದ ಶುಭ್ರ, ಅನುಪಮ ರಜತಸಿಂಹಾಸನವನ್ನಡರಿರುವನು, ನಟರಾಯರ ವಿಡಂಬನ ಸಿಂಹಾಸನಕ್ಕೆ ಮನಸೋಲುವನೇ ?

ಈ ಒಂಭತ್ತು ಕಥೆಗಳು ಒಂಭತ್ತು ಮಾರ್ಗಗಳನ್ನನುಸರಿಸಿವೆ, ಆದರವೆಲ್ಲವೂ ಒಂದೇ ಗಮ್ಯಸ್ಥಾನಕ್ಕೆ ಹೋಗುವವಾಗಿವೆ. ಈ ನಿಸರ್ಗ ಕಣಗಳನ್ನು ಕೂಡಿಸಿರುವುದು ಒಂದೇ ತಂತು—ನನ್ನ ಹೃದಯದಲ್ಲಿ ಉಕ್ಕಿಬಂದ ಅಂತಃಕರಣ.

ನನ್ನ ಈ ಅಲ್ಪಸೇವೆಯಿಂದ ಸಮಾಜದ ಘಾತಗಳಿಂದ ಗಾಸಿಗೊಂಡಿರುವವರಿಗೆ ಸ್ವಲ್ಪವಾದರೂ ಮನಶ್ಶಾಂತಿದೊರತಲ್ಲಿ, ಹಾಗೂ ಇತರರನ್ನು ನೋಯಿಸುವುದು 'ದೇವ' ನೊಪ್ಪದ ಕೆಲಸವೆಂದು ದಬ್ಬಾಳಿಕೆಯ ದರ್ಪದಲ್ಲಿ ಸತ್ಯ ಪ್ರೇಮಗಳಿಗೆ ತಿಲತರ್ಪಣವನ್ನು ಕೊಟ್ಟಿರುವವರಲ್ಲಿ ತಿಳಿವು ಸ್ವಲ್ಪವಾದರೂ ಉಂಟಾದರೆ ನಾನು ಧನ್ಯನೆಂದೆಣಿಸುತ್ತೇನೆ.

೨೮-೯.೧೯೩೦.
ಅನ್ನಪೂರ್ಣ : ವಿಶ್ವೇಶ್ವರಪುರಂ
ಬೆಂಗಳೂರು ಸಿಟಿ.

ಅ. ನ. ಕೃಷ್ಣರಾಯ.

# ಪರಿವಿಡಿ.

# ನನ್ನ ಮುದ್ದು ಸರೋಜ

೧

ನಾನೊಂದು ಸಲ ಬೆಂಗಳೂರಿನಿಂದ ಮೈಸೂರಿಗೆ ಪ್ರಯಾಣ ಮಾಡುತ್ತಲಿದ್ದೆ. ಈಗಿನ ಹಾಗೆ ರೈಲು ಮುಂತಾದ ಪ್ರಯಾಣ ಸೌಕರ್ಯಗಳಾಗಿರಲಿಲ್ಲ. ಎತ್ತಿನ ಗಾಡಿಗಳ ಪ್ರಯಾಣದ ಸುಖವನ್ನು ವಿವರಿಸಬೇಕೆಂದರೆ ಭವಭೂತಿಯಂತಹ ಕವಿಯಾಗಬೇಕೇ ಏನಾ, ನನ್ನಂತಹ ಮುಪ್ಪಿನ ಮುದುಕನಿಂದಾಗುವ ಕೆಲಸವಲ್ಲ. ಹೊತ್ತು ಮುಳುಗುವ ಮುಂಚೆಯೆ, ಗಾಡಿ ಕಟ್ಟಿಸಿ, ನಾನೂ ಅವಳೂ, ದಾರಿಗೆ ಸಾಲುವಷ್ಟು ಬುತ್ತಿಯನ್ನು ಕಟ್ಟಿಕೊಂಡು ಹೊರಟೆವು ಮೈಸೂರು ಮಹಾರಾಜರ ವರ್ಧಂತಿಯೆಂದರೆ ಈಗಿನ ಜನಗಳಿಗೆ ಹೇಗೋ ಏನೋ ?—ನಮಗಂತೂ, ಆ ಕಾಲದಲ್ಲಿ ಹುಟ್ಟಿದ ಹಬ್ಬಕ್ಕಿಂತಲೂ ಹಿರಿದಾದ ದಿನ. ವರ್ಧಂತಿಗೆ ಹೋಗುವ ಆಸೆಯಿಟ್ಟರೆ ಕಾಡಿ ಅಳುವ ಮಕ್ಕಳು ಸುಮ್ಮನಾಗುತ್ತಿದ್ದವು; ಗೃಹಿಣಿಯು ಸುಪ್ರಸನ್ನಳಾಗುತ್ತಿದ್ದಳು ; ಅಣ್ಣ ತಮ್ಮಂದಿರು ಹಿಂದಿನ ಕಲಹಗಳನ್ನು ಮರೆಯುತ್ತಿದ್ದರು ; ರೈತರು, ಐನೋರ ವೈಷಮ್ಯಗಳನ್ನು ಮರೆತು ಒಂದುಗೂಡುತ್ತಿದ್ದರು. ಮೈಸೂರಿನಲ್ಲೇ ಹುಟ್ಟಿ ಬೆಳೆದವನಾಗಿದ್ದರೂ ಅನುಕೂಲವಿಲ್ಲದೆ, ವರ್ಧಂತಿಯನ್ನು ನೋಡಲಾಗಿದ್ದಿಲ್ಲ. ವರ್ಷಾಕಾಲದ ಕೆಲಸವೇ ಸಾಕಾಗುತ್ತಿತ್ತು. ಸಾಲದುದಕ್ಕೆ ೯೦ ಮೈಲಿಗಳ ಪ್ರಯಾಣವೆಂದರೆ, ನಾಲ್ಕರ ಛಳಿಯೇ ಬರುತ್ತಿತ್ತು ; ಎಲ್ಲಕ್ಕೂ ಹೆಚ್ಚಾಗಿ ಕಳ್ಳಕಾಕರ ಭಯ. ಮುಖ್ಯ, ಎಲ್ಲದಕ್ಕೂ ದೇವರ ಇಚ್ಛೆ ಬರಬೇಕು !! ಆ ವರ್ಷ ಎಂದಿಗಿಂತಲೂ ಫಸಲು ಚೆನ್ನಾಗಿಯಾಗಿ, ಕಬ್ಬಿನ ಬೆಳೆಯಲ್ಲಿ ೩೦೦ ರೂಪಾಯಿ ಹೆಚ್ಚಿಗೆ ಆದಾಯವು ಬಂದಿತ್ತು. ಇನ್ನು ತಡಮಾಡಿದರೆ ಮುಂದೆ ಇಂತಹ ಅವಕಾಶವೇ ಸಿಗಲಾರದೆಂದು ನೆನೆದು ಗೃಹಿಣಿಯೊಂದಿಗೆ ಹೊರಟೆ, ಬಿಟ್ಟೆ. ಕೆಂಪನ ಗಾಡಿಯನ್ನೆ ಗೊತ್ತುಮಾಡಿದೆವು ಅವನ ಜೊತೇಲಿ ಒಂದೆತ್ತು ಮಹಾಮಾರಿಗೆ ತುತ್ತಾಗಿದ್ದುದರಿಂದ, ಮಾಗುಡ್ಡನ "ಕರೀಮಾರ"

ನನ್ನ ತಂದು ನೊಗಕ್ಕೆ ಹೂಡಿದ—ಜೊತೆಯೂ ಚೆನ್ನಾಗಿ ಕೂಡಿತು. ಗಾಡಿಯು ಬೆಚ್ಚಗಿರಲೆಂದು ತುಂಬಾ ರಾಗೀ ಹುಲ್ಲು ಹಾಕಿಸಿ, ಗಾಳಿಗೆ ದುರಾಗಿ ಮುಂಭಾಗದಲ್ಲೊಂದು ತೆರೆಯನ್ನು ಕಟ್ಟಿಸಿ ಹೊರಟೆವು. ಎತ್ತುಗಳಿಗೂ ಸಹ ನಮ್ಮಂತೆಯೇ ಚಾಮುಪ್ರಭುವಿನ ಸಿರಿವೈಭವಗಳನ್ನು ನೋಡಿ ಮನದಣಿಯಬೇಕೆಂದು ಆಸೆಯಿದ್ದಂತೆ ತೋರುತ್ತಿದ್ದಿತು. ಮೂಕ ಪ್ರಾಣಿಗಳಿಗೆ ಹೆಚ್ಚು ಆಯಾಸವಾಗಬಾರದೆಂದು ೨೦ ಮೈಲಿಗಳಾದೊಡನೆಯೇ ಬಂದಲ್ಲಿಯೇ ತಂಗುತ್ತಿದ್ದೆವು.

ಪ್ರಯಾಣ 'ಸ್ವಲ್ಪ ನಿಧಾನ' ಎನ್ನುವುದೊಂದು ಬಿಟ್ಟು ಮಿಕ್ಕ ಯಾವ ವಿಚಾರದಲ್ಲಿಯೂ ಬೇಸರವುಂಟಾಗಲಿಲ್ಲ. ಹಳ್ಳಿಗಾಡಿನಲ್ಲೇ ಹುಟ್ಟಿಬೆಳೆದು, ಅಲ್ಲಿನ ಕಾಡುಮೇಡುಗಳಲ್ಲಿ ಓಡಾಡಿ ಹಸರು ಹುಲ್ಲಿನ ಮೇಲೆ ಮಲಗಿ ಗರಿಕೆಯನ್ನು ಮೆಲ್ಲುತ್ತಾ ಲಾವಣಿಗಳನ್ನು ಹೇಳಿ ಚೆನ್ನೆಯರೊಡನೆ ಚಲ್ಲಾಟವಾಡಿ, ಅವರಿಂದ ಪ್ರೀತಿಯ ಪೆಟ್ಟುಗಳನ್ನು ತಿಂದರೂ ನಗುನಗುತ್ತಾ ಕಣಿಗಲು ಹೂವಿನ ಗೊಂಚಲುಗಳನ್ನು ಕಿತ್ತು ತುರುಬಿಗೆ ಮುಡಿಸುವ ಸುಖವನ್ನು ಈಗಿನ ಕಾಲದವರೇನು ಬಲ್ಲರು? ಸೂರ್ಯನಾರಾಯಣನು ಅಸ್ತಂಗತನಾದೊಡನೆಯೇ ಅಜ್ಜನ ಸುತ್ತಲೂ ಹುಡುಗ ಹುಡುಗಿಯರು ಕೂಡಿ ಅವನ "ಒಂದಾನೊಂದು ಕಾಲದ" ಕಥೆಗಳನ್ನು ಕೇಳುತ್ತ ಕೇಳುತ್ತ, ಒಬ್ಬರ ಜಡೆಗೆ ಇನ್ನೊಬ್ಬರ ಜಡೆಯನ್ನು ಗಂಟುಹಾಕುತ್ತಾ, ಇಲ್ಲವೆ, ಊಬಿನ ಮುಳ್ಳನ್ನು ಲಂಗದ ತುದಿಗೆ ಶಬ್ದವಿಲ್ಲದೆ ಹಚ್ಚುತ್ತಾ, ಅವರ ವೇದನೆಯನ್ನು ನೋಡಿ ಶಕುಂತಲೆಯನ್ನು ರಕ್ಷಿಸಲು ದುಷ್ಯಂತರಾಯನು ಹೋದಂತೆ ಹೋಗಿ, ನಿವಾರಿಸಿ, ಕೊನೆಯಲ್ಲಿ ಮೂದಲಿಸುತ್ತಿದ್ದುದರ ವಿವರವನ್ನಾದರೂ ಹೇಗೆ ತಿಳಿಸಲಿ?

ಪ್ರಯಾಣ ಬೆಳೆಸುತ್ತಿದ್ದಂತೆಯೇ ಎದುರಾಗಿ, ನೀರುತುಂಬಿದ ಮಿರುಮಿರುಗುವ ಕೊಡಗಳನ್ನು ತಲೆಯಮೇಲೆ ಹೊತ್ತು, ಕುಕ್ಕೆ ತುಂಬಾ ಬಟ್ಟೆಗಳನ್ನು ಒಗೆದುಕೊಂಡು ಗಂಡಂದಿರ ಗಂಡಸುತನಗಳನ್ನು ಮಾತನಾಡಿಕೊಳ್ಳುತ್ತಾ ಬರುತ್ತಿದ್ದವರನ್ನೂ, ಸಾಲುಮರದ ಒಣಗಿ ಉದುರಿದ್ದ ಕಡ್ಡಿಗಳನ್ನಾಯ್ದು ಬೆಳಗಿನ ಗ್ರಾಸವನ್ನು ಚಿಂತಿಸುತ್ತಾ ಬರುತ್ತಿದ್ದವರನ್ನೂ, ಮಾಘಕ್ಕೆ ಬರುವ ಮಗಳ ಮದುವೆಯನ್ನು ನೆರವೇರಿಸುವ ಚಿಂತನೆಯನ್ನು

ಮಾಡುತ್ತ ಬರುತ್ತಿದ್ದವರನ್ನೂ, ಯಾವ ಚಿಂತನೆಯೂ ಇಲ್ಲದೆ ಸೂರ್ಯ ಚಂದ್ರರಂತೆ ಶುಭ್ರ ಕಾಂತಿಯಿಂದ ನಗುತ್ತ ನಲಿಯುತ್ತ, ಕುಣಿಯುತ್ತ ಕುಪ್ಪಳಿಸುತ್ತ ಬರುತ್ತಿದ್ದ ಕಂದಮ್ಮಗಳನ್ನೂ ಕಾಣುತ್ತಿದ್ದೆವು. ಇದರಿಂದ ಪ್ರಪಂಚವೆಲ್ಲಾ ಸ್ವಲ್ಪ ನಗು, ಸ್ವಲ್ಪ ಅಳುವಿನ ಮಯವೆಂದು ತೋರುತ್ತಿದ್ದಿತು. ರೊಟ್ಟಿ ಸಿಕ್ಕಿತೆಂದು ಒಬ್ಬನು ಆನಂದಪಟ್ಟರೆ, ನಾಳಿನಪಾಡೇನೆಂದು ಒಬ್ಬನು ರೋದಿಸುವನು. ಸುಖದ ಮಹಡಿಯನ್ನು ಹತ್ತಲಿಕ್ಕೆ ಎಲ್ಲಾ ಸಾಹಸಮಾಡಿ ಪ್ರಯತ್ನಪಡುವವನು, ಕೆಲವು ಮೆಟ್ಟಲುಗಳನ್ನು ಹತ್ತುವುದರೊಳಗಾಗಿಯೇ ಬೀಳುವನು; ಯಾವ ಪ್ರಯತ್ನವನ್ನೂ ಮಾಡದೆ ಕುಳಿತಿರುವವನಿಗೆ ರಾಶಿ ರಾಶಿ ಸುಖಸ್ವರ್ಣವು ಬರುವುದು. ಇದರ ರಹಸ್ಯವೇನು? ಎಂದು ಕ್ಷಣಕಾಲ ಯೋಚಿಸುತ್ತಾ ಕುಳಿತೆನು. ಮಾತನಾಡದ ನನ್ನ ಸ್ಥಿತಿಯ ನಿಜಗುಣವನ್ನರಿಯದ ಗೃಹಿಣಿಯು ಮೌನವೆಂದು ನಂಬಿ ಸುಲ್ಲಿನ ತುದಿಯೊಂದನ್ನು ಮೃದುವಾಗಿ ನನ್ನ ಮುಖದಮೇಲೆ ಆಲ್ಲಾಡಿಸಿದಳು; ಕೈಯನ್ನು ಹಿಂದೆಗೆಯುವಾಗ ಕಂಕಣಗಳು ಕಿಂಕಿಣಿಯ ನಾದವನ್ನು ಮಾಡಿದುವು. ಯೋಚನೆಯ ಬೇರೊಂದು ಪ್ರಪಂಚದಲ್ಲಿದ್ದ ನನಗೆ ಎಚ್ಚರವಾದಂತಾಯಿತು. ಬೆದರಿ ಪಕ್ಕಕ್ಕೆ ತಿರುಗಿದೆ. ಗೃಹಿಣಿಯ ಸುಂದರ ಕಣ್ಣುಗಳು, ತುಂಟತನದ ನಗೆ, ನನ್ನ ಹೃದಯವನ್ನೇ ಕದಿಯುತ್ತಿದ್ದವು. ವಿನೋದಕ್ಕಾಗಿ ಕೋಪಗೊಂಡವನಂತೆ ನಟಿಸಿದೆ. ಪಾಪ! ಎಳೆಗರುಳು; ಕಣ್ಣುಗಳ ತುಂಬಾ ಅಮೃತ ಬಿಂದುಗಳು ತುಂಬಿದುವು. ನನ್ನ ಮನಸ್ಸಿಗೇ ಬಹು ನೋವುಂಟಾಯಿತು. ಕಾಮನ ಬಿಲ್ಲಿನಂತೆ ಬಗ್ಗಿದ್ದ ಗಡ್ಡವನ್ನು ಹಿಡಿದಲುಗಿಸಿ, ಕಣ್ಣುಗಳನ್ನೊರಸುತ್ತ ಅಲುಗಾಡುತ್ತಿದ್ದ ತುಟಿಗಳಿಗೆ ನನ್ನ ತುಟಿಗಳಿಂದ ಪ್ರೇಮಮಂತ್ರವನ್ನುಪದೇಶಿಸಿದೆನು. ಅಳುವಿಗೆ ಅಂಕದ ಪರದೆಯು ಬಿದ್ದಿತು. ಕಾಂತೆಯು ನಾಚಿಕೆಯಿಂದ ತಲೆಬಾಗಿ "ನೀವು ಯಾವಾಗಲೂ ಹೀಗೇನೇ!" ಎಂದಳು. ನಾನು ತಲೆಯನ್ನೆತ್ತಿ ಹಿಡಿದು "ಹೌದು, ನಾನು ಯಾವಾಗಲೂ ಹೀಗೇನೇ" ಎಂದೆನ್ನುತ್ತಾ ಅಪ್ಪಿ ಮನದಣಿಯ ಚುಂಬಿಸಿದೆನು. ಇನ್ನು ಕನಲುವುದು ಅವಳ ಭಾಗ. ನನ್ನೆರಡು ಕೈಗಳನ್ನು ಕಿತ್ತೊಗೆಯಲು ಹೋಗಿ ಪುನರಾಲೋಚನೆಯಿಂದ ಹಾಗೇ ಹಿಡಿದು ಸ್ವಲ್ಪ ಹೊತ್ತು ಚಿಂತಿಸಿ "ನಾನೇನು ಭಾಗ್ಯಮಾಡಿದ್ದೆ ಹೇಳಿ—ನಿಮ್ಮವಳಾಗುವ

ದಕ್ಕೆ" ಎಂದಳು. ಏನು ಮನೋಭಾವ! ಏನದು ಕಣ್ಣುಗಳಿಂದ ಹೊರ ಚಲ್ಲುತ್ತಿದ್ದ ಕೃತಜ್ಞತೆ!! "ಅಯ್ಯೋ ಹುಚ್ಚೀ, ಭಾಗ್ಯವು ನಿನ್ನದೋ, ನನ್ನದೋ" ಎಂದಂದು ಕೊಂಡು ಸುಮ್ಮನಾದೆನು.

೨

ಎರಡು ಮೂರು ದಿವಸಗಳ ಪ್ರಯಾಣವಾದ ಮೇಲೆ ನಾವು ಮದ್ದೂರಿನ ಬಳಿಗೆ ಬಂದೆವು. ದೂರದಲ್ಲೊಂದು ಆರ್ಕಾಟು ಹಂಚಿನ ಮನೆಯು ಕಾಣಬರುತ್ತಿತ್ತು. ಮನೆಯು ಚಿಕ್ಕದಾದರೂ ಚೊಕ್ಕಟವಾಗಿದ್ದಿತು. ಮನೆಯ ಮುಂದೆ ಕೆಲವು ಗಿಡಗಳು, ಅರಶಿನ ಕುಂಕುಮಗಳಿಂದ ಪೂಜಿಸಲ್ಪಟ್ಟಿದ್ದ ಒಂದು ವೃಂದಾವನ. "ಮನವನ್ನು ರಮಿಸುವ ಹೂಗಿಡಗಳು, ಆತ್ಮವನ್ನು ವಿರಮಿಸುವ ಹೆಂಗಸರು ಮಕ್ಕಳು"—ಎರಡಿಲ್ಲದ ಮೇಲೆ ಮನೆಯೂ ಸ್ಮಶಾನವೇ ಎಂದು ನನಗೆನಿಸಿತು. ವಪ್ಪಾರದಲ್ಲಿ ಚಿಕ್ಕ ಮಗುವೊಂದು ಕೆಲವು ಬೊಂಬೆಗಳನ್ನಿಟ್ಟುಕೊಂಡು ಆಡುತ್ತಿದ್ದಿತು. ಮುಖ್ಯವಾಗಿ ಅವುಗಳಲ್ಲಿ ಎರಡು ಚಂದಣದ ಬೊಂಬೆಗಳು ಒಂದೆತ್ತರದ ಸ್ಥಳದಲ್ಲಿ ಗೋಡೆಯನ್ನೊರಗಿಕೊಂಡು ನಿಂತಿದ್ದುವು. ಮಗುವು ಒಂದು ತಟ್ಟೆಯಲ್ಲಿ ಮಣ್ಣಿನಾರತಿಯನ್ನು ಮಾಡಿಕೊಂಡು "ಆರತಿ ಬೆಳಗಿರೆ ನಾರಿಯರೆಲ್ಲರು ಮಾರಸುಂದರ ಸುಕುಮಾರನಿಗೆ" ಎಂದು ಹಾಡುತ್ತ ಆರತಿಯನ್ನು ಬೆಳಗುತ್ತಿದ್ದಿತು. ನನಗೆ ಹಿಡಿಸಲಾರದಷ್ಟು ನಗು ಬಂದಿತು ನೋಡಲು ಬೇಸರಿಸುವ ಕರಿ ಬೊಂಬೆಗಳಲ್ಲಿ ಕೂಡ ಪ್ರಾಣವನ್ನು ಕಂಡು, ಅವುಗಳಿಗೆ, ಸರ್ವ ಯಾಜಮಾನ್ಯವನ್ನು ವಹಿಸಿ ತಾನೇ ಮದುವೆ ಮಾಡಿಸಿ "ಚಿರವಾಗಿರಲಿ ವರ ದಂಪತಿಗಳು" ಎಂದು ಮನಮುಟ್ಟಿ ಆಶೀರ್ವಾದವನ್ನು ಮಾಡುವ ಆ ಕಂದಮ್ಮನ ಹೃದಯದ ವಿಶಾಲತೆಯಲ್ಲಿ ಒಂದು ಭಾಗ ಕೂಡ ನಮ್ಮಲ್ಲಿಲ್ಲವಲ್ಲಾ ಎಂದೆನಿಸಿತು. ಜೀವವಿಲ್ಲದ ಅಸಹ್ಯಕರವಾದ ಬೊಂಬೆಗಳಲ್ಲಿ ಕೂಡ ಜೀವನ ಸರ್ವಸ್ವವನ್ನೂ ಅದು ಕಾಣಬಲ್ಲುದಾದರೂ, ಜೀವಂತರಾಗಿ ನಮ್ಮೊಂದಿಗೇ ಓಡಾಡುವ ಜನಗಳಲ್ಲಿ ಕೂಡ ನಾವು ಜೀವನದ ಮರ್ಮವನ್ನು ಕಂಡುಕೊಳ್ಳಲಾರದಾಗಿರುವೆವಲ್ಲಾ! ಬೆಳೆಯದ ಮಗುವಿನ ಬುದ್ಧಿಯು ಹೆಚ್ಚೋ, ಅನುಭವ ವಿದ್ಯೆಗಳಿಂದ ತುಂಬಿದ, ಬೆಳೆದ ನಮ್ಮ ಬುದ್ಧಿಯು ಹೆಚ್ಚೋ?

ಮಗುವಿನ ಬಟ್ಟನೆಯ ಮುಖ, ಸುಳಿಗುರುಳು, ಪುಟ್ಟಪುಟ್ಟ ಹೆಜ್ಜೆಗಳು, ಮುಂದೆ ಬಿದ್ದುಹೋಗಿದ್ದ ಹಲ್ಲುಗಳ ಮಧ್ಯೆ ತೂರಿ, ತುಟಿಗಳ ಗಡಿಯನ್ನು ಹಾರಿ ಪ್ರಪಂಚವನ್ನೇ ಆನಂದಸಾಗರದಲ್ಲಿ ಮುಳುಗಿಸಿ ತೇಲಿಸಲು ಬರುವಂತಹ ನಗು, ಬಣ್ಣಗಳ ಕೂಟದಂತಿದ್ದ ಮುಖವರ್ಣ, ರವಿಯ ಮುಖ ಬಿಂಬದ ಮೇಲೆ ಪ್ರಾತಃ, ಮಧ್ಯಾಹ್ನ, ಸಾಯಂಕಾಲಗಳನ್ನು ಸೂಚಿಸಲು ಬದಲಾಯಿಸುತ್ತಿದ್ದ ಬಣ್ಣಗಳಂತಿದ್ದ ಕಪೋಲಕಾಂತಿಯ ವರ್ಣವೈವಿಧ್ಯ—ಇವುಗಳನ್ನು ನೋಡಿ ನನ್ನ ಮನಸ್ಸು ಸೋತಿತು ಮಗುವನ್ನು ಹಿಡಿದೆತ್ತಿ, ಅಪ್ಪಿ ಮುದ್ದಾಡಬೇಕೆಂದಾಸೆಯಾಯಿತು ಇದನ್ನು ನಾನು ಚಿಂತಿಸುತ್ತಿದ್ದ ಹಾಗೆಯೇ ಗಾಡಿಯು ನಿಲ್ಲಲು, ರೆಪ್ಪೆ ಮುಚ್ಚುವುದರೊಳಗಾಗಿ ಗೃಹಿಣಿಯು ಇಳಿದು ಮಗುವನ್ನು ಮುದ್ದಾಡುತ್ತಿದ್ದಳು. ಇದನ್ನು ಯೋಚಿಸುತ್ತಿದ್ದವನು ನಾನು, ಇಳಿದು ಕೆಲಸಕ್ಕೆ ಆರಂಭಮಾಡಿದವಳವಳು. ಇದರ ಕಾರಣವೇನೆಂದು ಯೋಚಿಸಿ, **ಕಂದನ ಸಂದೇಶಕ್ಕೆ ತಾಯಿಯ ಕರುಳೇ ಮೊದಲು ಪ್ರತಿಧ್ವನಿ ಕೊಡುವುದು,** ಎಂದು ನಿರ್ಧರಿಸಿಕೊಂಡೆನು. ನಾನೂ ಇಳಿದು ಮಗುವನ್ನಾಡಿಸುತ್ತಾ ಎಷ್ಟು ಹೊತ್ತನ್ನು ಕಳೆದೆನೋ ಜ್ಞಾಪಕವಿಲ್ಲ. ಸ್ವಲ್ಪ ಕಾಲದ ಅನಂತರ ಒಳಗಿನಿಂದ ಯಾರೋ "ಸರೋಜಾ" ಯೆಂದು ಕರೆಯಲು ಮಗುವು ಒಳಕ್ಕೆ ಹೋಗಲಿಚ್ಛಿಸಿತು. ಗೃಹಿಣಿಯು ಮತ್ತೊಮ್ಮೆ ಚುಂಬಿಸಿ, ಮಗುವನ್ನು ಬಿಡಲಾರದೆ ಅದರ ಎರಡು ಕೈಗಳಿಗೂ ಎರಡು ರೂಪಾಯಿಯನ್ನಿತ್ತು ಚಿಂತಾಕ್ರಾಂತತೆಯಿಂದ ಗಾಡಿಯನ್ನು ಹತ್ತಿದಳು. ಮಗುವು ಹೊರಟುಹೋಯಿತಲ್ಲಾ ಎಂಬ ವ್ಯಸನವೇನೋ, ಎಂದಂದುಕೊಂಡು ಸುಮ್ಮನಾದೆನು.

೩

ಇದು ನಡೆದು ಈಗ ಸುಮಾರು ೩೦-೩೨ ವರ್ಷಗಳಾದವು. ವರ್ಧಂತಿಯನ್ನು ಮುಗಿಸಿಕೊಂಡು ನಾವು ಬಂದಂದಿನಿಂದಲೂ ಅವಳ ಮೈಯಲ್ಲಿ ಸರಿಯಿರಲಿಲ್ಲ. ಮೈಸೂರಿನಲ್ಲಿ ಒಂದೆರಡು ದಿವಸ ಜ್ವರ ಬಂದಿತ್ತು. ಪ್ರಯಾಣದ ಆಯಾಸವೆಂದು ತಿಳಿದು ಔಷಧ ಕೊಡಿಸಿದ್ದೆನು, ಗುಣವೂ ಆಗಿತ್ತು. ಆದರೆ ಜ್ವರದ ಬೀಜವೇ ಅವಳಲ್ಲಿ ಬಿತ್ತಲ್ಪಟ್ಟಿತ್ತೆಂದು ಅರಿಯಲಾರದೆ

ಹೋದೆನು. ಮೈಸೂರಿನ ಪ್ರಕರಣವು ಪುನಃ ಕಾಣಿಸಿಕೊಂಡಿತು. ಚಿನ್ನದ ರೇಕಿನಂತಿದ್ದ ಅವಳ ಮೈಗುಣವು ಕೆಡುತ್ತಾ ತರಗೆಲೆಯಂತಾಗುತ್ತಾ ಬಂದಿತು. ಜ್ವರವೊಂದೇ ಅಲ್ಲದೆ ಆಗಾಗ್ಗೆ ಕಾಲು ಕೈಗಳ ಛಳಕು ಬೇರೆ ಬರುತ್ತಿದ್ದಿತು. ಈ ಹೊತ್ತಿನ ಕಾಯಿಲೆಯು ನಾಳಿನ ದಿನ ಬೇರೆ ರೂಪವನ್ನು ತಾಳುತ್ತಿದ್ದಿತು. ತಿಳಿದ ದೇವರುಗಳಿಗೆಲ್ಲಾ ಹರಕೆ ಹೊತ್ತೆನು. "ಬೆಳ್ಳಿಯ ಕಾಲ್ಗಡಗಗಳನ್ನು ಮಾಡಿಸಿ ನಿನ್ನೆರಡು ಕಾಲುಗಳಿಗೂ ತೊಡಿಸುವೆನು ತಾಯಿ" ಎಂದು ಚಾಮುಂಡೇಶ್ವರಿಯನ್ನು ಕೋರಿದೆನು. "ನಾವಿಬ್ಬರೂ ಯಾತ್ರೆಬಂದು ಬೆಟ್ಟ ಹತ್ತಿ ನಿನಗೆ ಕಪ್ಪಕಾಣಿಕೆ ಒಪ್ಪಿಸುವೆವು, ಮಹಾರಾಯ" ಎಂದು ತಿರುಪತಿ ತಿಮ್ಮಪ್ಪನನ್ನು ಬೇಡಿದೆನು. "ನೀನು ಕೇಳಿದಷ್ಟು ಕೋಳಿ ಕುರಿಗಳನ್ನು ಬಲಿಗೊಡುವೆ; ನನ್ನ ಈ ರತ್ನವನ್ನುಳಿಸು" ಎಂದು ಮಾರಮ್ಮನಿಗೆ ಹರಕೆ ಹೊತ್ತೆನು. ಯಾವ ದೇವರಿಗೂ ನನ್ನ ಮೇಲೆ ದಯೆ ಹುಟ್ಟಲಿಲ್ಲ. ಇತ್ತ, ವೈದ್ಯರ ದಾಳಿಯು ನನ್ನನ್ನು ಸುಲಿಯುತ್ತ ಬಂದಿತು; ಮಂತ್ರವಾದಿಗಳ ಗುಂಪು ನನ್ನ ರಕ್ತವನ್ನೇ ಹೀರುತ್ತ ಬಂದಿತು. ವ್ರತಗಳಾದವು, ಹೋಮಗಳಾದವು. ಮೃತ್ಯು ಮಹಿಷದಾನವಾಯಿತು, ನವಗ್ರಹ ಜಪಗಳಾದವು; ಯಾರು ಯಾರು ಬಂದು ಏನೇನು ಮಾಡೆಂದು ಹೇಳುತ್ತಿದ್ದರೋ ಎಲ್ಲವನ್ನು ಬಿಡದೆ ಮಾಡುತ್ತಿದ್ದೆನು ನನ್ನ ರತ್ನವೊಂದು ಉಳಿದರೆ ಭಿಕ್ಷಾಟನೆ ಬೇಕಾದರೂ ಮಾಡಿಕೊಂಡು ಒಬ್ಬರ ಮುಖವನ್ನೊಬ್ಬರು ನೋಡಿ ಕೊಂಡಿರಬಹುದೆಂಬುದೇ ನನ್ನ ಧೈರ್ಯ. ಹಾಯ್! ಯಾವ ಪ್ರಯತ್ನವೂ ಫಲಕಾರಿಯಾಗಲಿಲ್ಲ. ಅವಳ ದೇಹದ ಶಕ್ತಿಯು, ಕುಗ್ಗುತ್ತಾ ಬಂದಿತು ನರಗಳು ಬಲಹೀನವಾದವು, ಕಣ್ಣುಗಳು ಕಾಂತಿಹೀನವಾಗಿ ಗುಣಿಬೀಳುತ್ತಾ ಬಂದುವು, ಮೈಯಲ್ಲಾ ಒಣಗಿ ಸೌದೆಯಂತಾಗುತ್ತಾ ಬಂದಿತು. ಅಯ್ಯೋ! ನನ್ನ ಜೀವದ ಪುತ್ಥಳಿಯು ಇದೇ. ನನ್ನ ಕಣ್ಣಿನ ಬೊಂಬೆಯು ಇವಳೇ, ನನ್ನನ್ನೇ ತನ್ನ ಭಾಗದ ದೇವರೆಂದು ನಂಬಿ ಹಗಲಿರುಳು ಭಗವಂತನ ಸೇವೆಗಿಂತಲೂ ನನ್ನ ಸೇವೆಯೇ ಹೆಚ್ಚು ಪುಣ್ಯಕರವೆಂದು ನಂಬಿದ್ದ ದೇವಮಾನ್ಯೆ ಇವಳೇ, ನನ್ನ ಕಷ್ಟಸುಖಗಳೆಲ್ಲವನ್ನೂ ತನ್ನದೇ ಎಂದು ಭಾವಿಸಿ ನನ್ನನ್ನು ನೆರಳಿನಂತೆ ಆಶ್ರಯಿಸಿದ್ದ ದೇವತೆಯೇ ಇವಳೇ, ಹಾ! ಭಗ

ವಂತಾ! ನಿರಪರಾಧಿಯಾದ ಈ ನನ್ನ ರತ್ನದಲ್ಲಿ ನಿನಗೇಕೆ ಆಗ್ರಹ! ಎಂದೆನಿಸಿತು. ನನ್ನ ಸೇವೆಯಲ್ಲವೂ ನಿಷ್ಫಲವಾಗುತ್ತ ಬಂತು. ವೈದ್ಯರು ರೋಗಿಯು ಗುಣವಾಗುವುದರ ಆಸೆಯನ್ನು ಬಿಟ್ಟರು, ಮಂತ್ರವಾದಿಗಳು ಹಿಂದೆ ಸರಿದರು, ಪುರೋಹಿತರು ಧೈರ್ಯದ ಮಾತುಗಳನ್ನು ಬಿಟ್ಟರು. ನೆಂಟರಿಷ್ಟರೂ ಬಂಧು ಬಳಗದ ಎಲ್ಲರೂ ಕೈಬಿಟ್ಟರು. ಜೀವಿಸಿರುವ ವರೆಗೆ ತನ್ನ ಜನ್ಮವನ್ನು ಜನಗಳ ಮೇಲ್ಮೆಗಾಗಿ ತೆಯಿದು, ಅವರವರ ದುಃಖಗಳನ್ನು ನಿವಾರಿಸಿ ಎಲ್ಲರ ಹೃದಯದಲ್ಲಿಯೂ ಪ್ರೇಮಶಾಂತಿಗಳ ಮೊಳಕೆಗಳನ್ನು ನೆಟ್ಟು, ಎಲ್ಲರ ಸೇವೆಯನ್ನೂ ಗೊಣಗದೆ ಪ್ರತಿಫಲವನ್ನಾಶಿಸದೆ ಮಾಡಿದ ನನ್ನ ರನ್ನಕ್ಕೆ ಕೊನೆಗಾಲದಲ್ಲಿ ಮೃದು ಮಾತುಗಳನ್ನಾಡುವುದು ಕೂಡ ಜನಗಳ ಮನಸ್ಸಿಗೆ ಕಹಿಯಾಗಿ ತೋರಿತು ಹೆಂಗಸಿನಂತೆ ನಾನು ಗೋಳಿಟ್ಟೆನು, ಭಿಕ್ಷುಕನಂತೆ ಬೇಡಿದೆನು, ಶತ್ರುವಿನಂತೆ ಕೋಪಗೊಂಡೆನು. ಎಲ್ಲವನ್ನೂ ತೊರೆಯುವೆನೆಂದು ಬಡತನದ ಹಾದಿಯನ್ನೇ ಅವಳ ಸಲ್ವವಾಗಿ ಒಪ್ಪಿದೆನು. ಆದರೇನು! ಪ್ರೇಮಸಾಗರನಾದ ಪರಮಾತ್ಮನ ಪ್ರೇಮದ ಕೆಲಸಗಳು ಕಣ್ಣೀರು ಕಾಲುವೆಗಳು ಹರಿಯುತ್ತಿರುವ ಈ ಪ್ರಪಂಚವು ಶುದ್ಧ ನಿರರ್ಥಕವಾಯಿತು. ಇಲ್ಲದ ಕರುಣೆಯನ್ನು ನಂಬಿ ಮೋಸಹೋದ ನಾನು ಇತರರನ್ನೇಕೆ ದೂಷಿಸಲಿ? ಕರುಣೆಯಂತೆ, ದಯಾಳುವಂತೆ, ಪ್ರೇಮಸಾಗರವಂತೆ! ಹಾ!! ಹಾ!!!

೪

ಶುಕ್ಲಪಕ್ಷದ ಒಂದು ರಾತ್ರಿ; ಹಾಲು ಚೆಲ್ಲಿದಂತೆ ಬೆಳದಿಂಗಳು. ಉಡಿಯಲ್ಲಿ ಮಲ್ಲಿಗೆಯ ಹೂವನ್ನು ಚೆಲ್ಲಿದಂತೆ ನೀಲವಾದ ಆಕಾಶಮಂಡಲದಲ್ಲಿ ಮಿರುಮಿರುಗುವ ನಕ್ಷತ್ರಗಳು; ಗಾಢವಾದ ಶಾಂತಿಯ ಸರ್ವಾಧಿಕಾರವು ಹರಡಿದೆ. ಎಲ್ಲರ ಮನಸ್ಸು ಶಾಂತಿಯ ತಂಪನ್ನು ಹೊಂದಿ ಸುಖದಾಯಕವಾದ ನಿದ್ರೆಯೆಂಬ ತಾಯಿಯ ತೊಡೆಯನ್ನು ಸೇರಿದೆ. ಆದರೆ ನನ್ನ ಮನಸ್ಸು ಅಲ್ಲೋಲ ಕಲ್ಲೋಲವಾಗಿದ್ದಿತು. ಅವಳಿಗಂತು ೧೦೪ ಡಿಗ್ರಿಗಳ ಜ್ವರವು ಏರಿತ್ತು. ಬಾಯಲ್ಲಿ ಮಾತೇ ಸರಿಯಾಗಿ ಹೊರಡುತ್ತಿರಲಿಲ್ಲ. ಪದೇ ಪದೇ ಸರೋಜಾ—ಅಂಥಾ ಮಗು-ನನ್ನ ಮಗು ಎಂದು ಅರ್ಥವಿಲ್ಲದ

ಮಾತುಗಳನ್ನಾಡುತ್ತಿದ್ದಳು. ಅವಳ ಒಂದೊಂದು ಮಾತು ನನ್ನ ಹೃದಯವನ್ನು ಇರಿಯುತ್ತಿದ್ದಿತ್ತು. ಸೌಂದರ್ಯದ ಅಧಿದೇವತೆಯೋ ಅಂತು ಮೃತ್ಯು ಬಾಧೆಯಿಂದ ತೊಳಲುತ್ತಿದ್ದುದು ಯಾವ ಉಪಾಸಕನಿಗೆ ತಾನೆ ಸಂಕಟವಾಗುವುದಿಲ್ಲ! ನಾನು ಹಾಸಿಗೆಯ ಬಳಿಯಲ್ಲೇ ಕುಳಿತು ಉಪಚರಿಸುತ್ತಿದ್ದೆ ಔಷಧ ಸೀಸೆಗಳ ರಾಶಿಯನ್ನು ನೋಡಿ ನಿಟ್ಟುಸುರುಬಿಟ್ಟೆ. ಹಾ! ನಾನೆಲ್ಲಿ ನೊಂದುಕೊಳ್ಳುವೆನೋ ಎಂದು ಬೇಸರವಿಲ್ಲದೆ ಎಂತಹ ಕಹಿಯಾದ ಔಷಧವನ್ನಾದರೂ ಕುಡಿಯುತ್ತಿದ್ದಳು-ಡಾಕ್ಟರು ಎರಡು ಘಂಟೆಗೊಮ್ಮೆ ಕುಡಿಸಬೇಕೆಂದು ಹೇಳಿ ಒಂದು ಔಷಧವನ್ನಿತ್ತು ಹೋಗಿದ್ದರು. ಔಷಧವನ್ನು ಪಾತ್ರೆಗೆ ಹಾಕಿ ಕೈಯಲ್ಲಿ ಹಿಡಿದುಕೊಂಡು ಮೆಲ್ಲಗೆ ಎಚ್ಚರಿಸಿದೆನು. ನಿದ್ರೆಯೇನೂ ಬಂದಿರಲಿಲ್ಲ. ಜ್ವರದ ತಾಪದಿಂದ ಕಣ್ಣುಗಳು ಮುಚ್ಚಿದ್ದವು. ಔಷಧವನ್ನು ನೋಡಿ ಎದ್ದು ಕುಳಿತುಕೊಳ್ಳಲಾಶಿಸಿದಳು. ಕುಳ್ಳಿರಿಸಿ ಔಷಧವನ್ನು ಹಿಡಿದೆನು. ನನ್ನನ್ನೇ ದಿಟ್ಟಿಸಿ ನೋಡಿ ಕಣ್ಣೀರುಗರೆದಳು. ನನಗೂ ದುಃಖವು ಉಕ್ಕಿ ಬಂದಿತು. ನಾನೂ ಕಣ್ಣೀರುಗರೆದೆನು.

ಅವಳು: ನಿಮ್ಮೊಂದಿಗಿದ್ದು ನಿಮ್ಮ ಸೇವೆಮಾಡಿ ಸುಖಪಡುವ ಪುಣ್ಯ ನನಗಿಲ್ಲ. ನೀವೇ ನನ್ನ ಸೇವೆ ಮಾಡಬೇಕಾಗಿದೆ.

ನಾನು: ಸೇವೆಯೇನು ಬಂತು ಹೇಳು, ಔಷಧವನ್ನು ಕುಡಿದು ಮಲಗಿಕೊ ಮೈ ಬೆವರುತ್ತಾ ಇದೆ. ಸ್ವಲ್ಪ ನಿದ್ರೆಯು ಬರಬಹುದು.

ಅವಳು: ಅಯ್ಯೋ! ನಿಮಗೆ ಭ್ರಾಂತಿ. ನಾನು ಬದುಕುತ್ತೇನೆಂದು ಭಾವಿಸಿದ್ದೀರಾ! ಹಿಂದಿನ ಜನ್ಮದಲ್ಲಿ ಯಾವ ಹೆಂಡತಿಯನ್ನು ಗಂಡನ ಸೇವೆಯಿಂದ ಅಗಲಿಸಿದೆನೋ! ಈಗ ನಾನು ನಿಮ್ಮನ್ನು ಬಿಟ್ಟು ಹೋಗಬೇಕಾಗಿದೆ.

ನಾನು: ಹೀಗೆಲ್ಲಾ ಮಾತಾಡಬೇಡ. ಸುಮ್ಮನೆ ಮಲಗಿಕೊ, ದೇವರಿದ್ದಾನೆ ಎಲ್ಲದಕ್ಕೂ. ಖಂಡಿತ ಗುಣವಾಗುತ್ತೆ. ಏನೂ ಯೋಚನೆ ಮಾಡಬೇಡ.

ಅವಳು: ಇಲ್ಲಾ! ನೀವು ನನಗೆ ಒಣ ಧೈರ್ಯ ಹೇಳುತ್ತಾ ಇದ್ದೀರಿ. ನಾನು ಖಂಡಿತ ಬದುಕೋದಿಲ್ಲ. ಹೋಗಲಿ, ನನ್ನ ಬಾಳು ಅಂತಹ ಬೆಲೆಯಾದ್ದೇನಲ್ಲಾ. ಆದರೆ ವಂಶಕ್ಕೆ ಒಬ್ಬ ಕಂದನನ್ನು ಹೆರಲಿಲ್ಲ.

ಇನ್ನು ಯಾರನ್ನಾದರೂ ಯೋಗ್ಯಳನ್ನು ನೋಡಿ ಮದುವೆ ಮಾಡಿ ಕೊಳ್ಳಿ. ಆ ಪುಣ್ಯಾಶಿಗಿತ್ತಿಯಿಂದಲಾದರೂ ವಂಶ ಬೆಳೆಯಲಿ. ಸರೋಜ! ಸರೋಜ! ಅಂಥಾ ಒಂದು ಮಗು ಇದ್ದಿದ್ದರೆ . . . . . .

ನಾನು: ನೀನೊಬ್ಬಳಿದ್ದರೆ ಮಿಕ್ಕ ಭಾಗ್ಯವೆಲ್ಲಾ ಆಗತ್ತೆ. ಸುಮ್ಮನೆ ಆಯಾಸ ಮಾಡಿಕೊಳ್ಳಬೇಡ, ಮಲಗಿಕೋ. ಈ ಔಷಧ ತೆಗೆದುಕೋ. ಹಾಳು ಕಹಿ. ನೀನಾಗುವ ಹೊತ್ತಿಗೆ ಕುಡಿಯುತ್ತಿ. ನಿನ್ನ ಗುಣಕ್ಕೆ . . . .

ಔಷಧವನ್ನು ಕುಡಿದು, ಅವಳು;—"ನನಗಾಗಿ ಎಷ್ಟು ತೊಂದರೆ? ನಿಮಗೆ ಒಂದು ತಾಸು ನಿದ್ದೆ ಕೂಡ ಇಲ್ಲ ಅಯ್ಯೋ! ಎಷ್ಟು ಬಡವಾಗಿ ಹೋದಿರಿ. ಹೊತ್ತಿಗೆ ಹೊತ್ತಿಗೆ ಅನ್ನವಿಲ್ಲ, ನಿದ್ರೆಯಿಲ್ಲ, ತಲೆಗಷ್ಟು ನೀರಿಲ್ಲ, ನನ್ನ ಬಾಳೇ, ನನ್ನ ಹಾಳು ಬಾಳೇ."

ನಾನು ಸಮಾಧಾನೋಕ್ತಿಗಳನ್ನೆಷ್ಟೋ ಹೇಳಿದೆನು ಆದರೇನು? ಅವು ಸಮಾಧಾನವನ್ನುಂಟುಮಾಡುವವೇ? ನಾನು ಬಳಲುವೆನಲ್ಲಾ, ವಂಶಕ್ಕೊಂದು ಮಗುವನ್ನು ಹೆರಲಿಲ್ಲವಲ್ಲಾ ಎಂಬ ಚಿಂತಾಪರಂಪರೆಗಳಿಂದ ಅವಳಿಗೆ ಬಿಡುಗಡೆಯೇ? ಹೀಗೆಯೇ ಅನುಭವಿಸುತ್ತಾ ಚಿಂತಿಸುತ್ತಾ ಕಡೆಗೊಂದು ದಿನ ಹಾ! ಆ ಒಂದು ದಿನ—ನನ್ನನ್ನು ತೊರೆದು—ನನ್ನ ಜೀವನದ ಸುಖವೆಲ್ಲವನ್ನೂ ಮಣ್ಣುಪಾಲು ಮಾಡಿ, ಶಾಂತಿಯ ಪವಿತ್ರ ಸ್ವರ್ಗಕ್ಕೆ ಹೊರಟೇ ಹೋದಳು. ನನ್ನ ಜೀವನದ ಗುರಿಯೂ, ಶಾಂತಿಯೂ, ಸುಖವೂ ಅವಳೊಂದಿಗೇ ಹೊರಟು ಹೋದುವು.

## ೫.

ಯಾವಳ ಸಮಾಗಮದಿಂದ ಬೆಂಗಳೂರಿನ ಪ್ರತಿಯೊಂದು ವಸ್ತುವೂ ನನಗೆ ಪ್ರಿಯವಾಗಿದ್ದಿತೋ ಅವಳ ಮೃತ್ಯುವಿನಿಂದ ಅವುಗಳೆಲ್ಲವೂ ನನಗೆ ಅಪ್ರಿಯವಾದವು. ಹೂವಿನ ತೋಟಗಳು, ಲತಾಮಂಟಪಗಳು, ಸುಂದರವಾದ ಚಿತ್ರಗಳು, ಮಧುರವಾದ ಗಾಯನ, ರುಚಿಕರವಾದ ಭಕ್ಷ್ಯಗಳು ಒಂದೂ ಬೇಡವಾಯಿತು. ಯಾರಿಗಾಗಿ ನಾನವುಗಳ ಸುಖವನ್ನನುಭವಿಸಲಿ? ಸುಗಂಧವಾದ ಗುಲಾಬಿಯ ರಚನೆಯನ್ನು ಮೆಚ್ಚಿ ಅದರ ಬಣ್ಣಕ್ಕೆ ಬೆರ

ಮಾತುಗಳನ್ನಾಡುತ್ತಿದ್ದಳು. ಅವಳ ಒಂದೊಂದು ಮಾತು ನನ್ನ ಹೃದಯ ವನ್ನು ಇರಿಯುತ್ತಿದ್ದಿತ್ತು. ಸೌಂದರ್ಯದ ಅಧಿದೇವತೆಯೋ ಅಂತು ಮೃತ್ಯು ಬಾಧೆಯಿಂದ ತೊಳಲುತ್ತಿದ್ದುದು ಯಾವ ಉಪಾಸಕನಿಗೆ ತಾನೆ ಸಂಕಟ ವಾಗುವುದಿಲ್ಲ! ನಾನು ಹಾಸಿಗೆಯ ಬಳಿಯಲ್ಲೇ ಕುಳಿತು ಉಪಚರಿಸುತ್ತಿದ್ದೆ. ಔಷಧ ಸೀಸೆಗಳ ರಾಶಿಯನ್ನು ನೋಡಿ ನಿಟ್ಟುಸುರುಬಿಟ್ಟೆ. ಹಾ! ನಾನೆಲ್ಲಿ ನೊಂದುಕೊಳ್ಳುವೆನೋ ಎಂದು ಬೇಸರವಿಲ್ಲದೆ ಎಂತಹ ಕಹಿಯಾದ ಔಷಧ ವನ್ನಾದರೂ ಕುಡಿಯುತ್ತಿದ್ದಳು. ಡಾಕ್ಟರು ಎರಡು ಘಂಟೆಗೊಮ್ಮೆ ಕುಡಿಸ ಬೇಕೆಂದು ಹೇಳಿ ಒಂದು ಔಷಧವನ್ನಿತ್ತು ಹೋಗಿದ್ದರು. ಔಷಧವನ್ನು ಪಾತ್ರೆಗೆ ಹಾಕಿ ಕೈಯಲ್ಲಿ ಹಿಡಿದುಕೊಂಡು ಮೆಲ್ಲಗೆ ಎಚ್ಚರಿಸಿದೆನು. ನಿದ್ರೆ ಯೇನೂ ಬಂದಿರಲಿಲ್ಲ. ಜ್ವರದ ತಾಪದಿಂದ ಕಣ್ಣುಗಳು ಮುಚ್ಚಿದ್ದವು. ಔಷಧವನ್ನು ನೋಡಿ ಎದ್ದು ಕುಳಿತುಕೊಳ್ಳಲಾಶಿಸಿದಳು. ಕುಳ್ಳಿರಿಸಿ ಔಷ ಧವನ್ನು ಹಿಡಿದೆನು. ನನ್ನನ್ನೇ ದಿಟ್ಟಿಸಿ ನೋಡಿ ಕಣ್ಣೀರುಗರೆದಳು. ನನಗೂ ದುಃಖವು ಉಕ್ಕಿ ಬಂದಿತು. ನಾನೂ ಕಣ್ಣೀರುಗರೆದೆನು.

ಅವಳು: ನಿಮ್ಮೊಂದಿಗಿದ್ದು ನಿಮ್ಮ ಸೇವೆಮಾಡಿ ಸುಖಪಡುವ ಪುಣ್ಯ ನನ ಗಿಲ್ಲ. ನೀವೇ ನನ್ನ ಸೇವೆ ಮಾಡಬೇಕಾಗಿದೆ.

ನಾನು: ಸೇವೆಯೇನು ಬಂತು ಹೇಳು, ಔಷಧವನ್ನು ಕುಡಿದು ಮಲಗಿಕೊ ಮೈ ಬೆವರುತ್ತಾ ಇದೆ. ಸ್ವಲ್ಪ ನಿದ್ರೆಯು ಬರಬಹುದು.

ಅವಳು: ಅಯ್ಯೋ! ನಿಮಗೆ ಭ್ರಾಂತಿ. ನಾನು ಬದುಕುತ್ತೇನೆಂದು ಭಾವಿ ಸಿದ್ದೀರಾ! ಹಿಂದಿನ ಜನ್ಮದಲ್ಲಿ ಯಾವ ಹೆಂಡತಿಯನ್ನು ಗಂಡನ ಸೇವೆಯಿಂದ ಅಗಲಿಸಿದೆನೋ! ಈಗ ನಾನು ನಿಮ್ಮನ್ನು ಬಿಟ್ಟು ಹೋಗಬೇಕಾಗಿದೆ.

ನಾನು: ಹೀಗೆಲ್ಲಾ ಮಾತಾಡಬೇಡ. ಸುಮ್ಮನೆ ಮಲಗಿಕೊ, ದೇವರಿದ್ದಾನೆ ಎಲ್ಲದಕ್ಕೂ. ಖಂಡಿತ ಗುಣವಾಗುತ್ತೆ. ಏನೂ ಯೋಚನೆ ಮಾಡ ಬೇಡ.

ಅವಳು: ಇಲ್ಲಾ! ನೀವು ನನಗೆ ಬಣ ಧೈರ್ಯ ಹೇಳುತ್ತಾ ಇದ್ದೀರಿ. ನಾನು ಖಂಡಿತ ಬದುಕೋದಿಲ್ಲ. ಹೋಗಲಿ, ನನ್ನ ಬಾಳು ಅಂತಹ ಬೆಲೆ ಯಾದ್ದೇನಲ್ಲಾ. ಆದರೆ ವಂಶಕ್ಕೆ ಒಬ್ಬ ಕಂದನನ್ನು ಹೆರಲಿಲ್ಲ.

ಇನ್ನು ಯಾರನ್ನಾದರೂ ಯೋಗ್ಯಳನ್ನು ನೋಡಿ ಮದುವೆ ಮಾಡಿಕೊಳ್ಳಿ. ಆ ಪುಣ್ಯಾಶಿಗಿತ್ತಿಯಿಂದಲಾದರೂ ವಂಶ ಬೆಳೆಯಲಿ. ಸರೋಜ! ಸರೋಜ! ಅಂಥಾ ಒಂದು ಮಗು ಇದ್ದಿದ್ದರೆ . . . . . .

ನಾನು: ನೀನೊಬ್ಬಳಿದ್ದರೆ ಮಿಕ್ಕ ಭಾಗ್ಯವೆಲ್ಲಾ ಆಗತ್ತೆ. ಸುಮ್ಮನೆ ಆಯಾಸ ಮಾಡಿಕೊಳ್ಳಬೇಡ, ಮಲಗಿಕೋ. ಈ ಔಷಧ ತೆಗೆದುಕೋ. ಹಾಳು ಕಹಿ. ನೀನಾಗುವ ಹೊತ್ತಿಗೆ ಕುಡಿಯುತ್ತಿ. ನಿನ್ನ ಗುಣಕ್ಕೆ . . . .

ಔಷಧವನ್ನು ಕುಡಿದು. ಅವಳು;—"ನನಗಾಗಿ ಎಷ್ಟು ತೊಂದರೆ ? ನಿಮಗೆ ಒಂದು ತಾಸು ನಿದ್ದೆ ಕೂಡ ಇಲ್ಲ ಅಯ್ಯೋ! ಎಷ್ಟು ಬಡವಾಗಿ ಹೋದಿರಿ. ಹೊತ್ತಿಗೆ ಹೊತ್ತಿಗೆ ಅನ್ನವಿಲ್ಲ, ನಿದ್ರೆಯಿಲ್ಲ, ತಲೆಗಸ್ಟು ನೀರಿಲ್ಲ, ನನ್ನ ಬಾಳೇ, ನನ್ನ ಹಾಳು ಬಾಳೇ."

ನಾನು ಸಮಾಧಾನೋಕ್ತಿಗಳನ್ನೆಷ್ಟೋ ಹೇಳಿದೆನು ಆದರೇನು ? ಅವು ಸಮಾಧಾನವನ್ನುಂಟುಮಾಡುವವೇ ? ನಾನು ಬಳಲುವೆನಲ್ಲಾ, ವಂಶಕ್ಕೊಂದು ಮಗುವನ್ನು ಹೆರಲಿಲ್ಲವಲ್ಲಾ ಎಂಬ ಚಿಂತಾಪರಂಪರೆಗಳಿಂದ ಅವಳಿಗೆ ಬಿಡುಗಡೆಯೇ? ಹೀಗೆಯೇ ಅನುಭವಿಸುತ್ತಾ ಚಿಂತಿಸುತ್ತಾ ಕಡೆಗೊಂದು ದಿನ ಹಾ! ಆ ಒಂದು ದಿನ—ನನ್ನನ್ನು ತೊರೆದು—ನನ್ನ ಜೀವನದ ಸುಖವೆಲ್ಲವನ್ನೂ ಮಣ್ಣುಪಾಲು ಮಾಡಿ, ಶಾಂತಿಯ ಪವಿತ್ರ ಸ್ವರ್ಗಕ್ಕೆ ಹೊರಟೇ ಹೋದಳು. ನನ್ನ ಜೀವನದ ಗುರಿಯೂ, ಶಾಂತಿಯೂ, ಸುಖವೂ ಅವಳೊಂದಿಗೇ ಹೊರಟು ಹೋದುವು.

೫.

ಯಾವಳ ಸಮಾಗಮದಿಂದ ಬೆಂಗಳೂರಿನ ಪ್ರತಿಯೊಂದು ವಸ್ತುವೂ ನನಗೆ ಪ್ರಿಯವಾಗಿದ್ದಿತೋ ಅವಳ ಮೃತ್ಯುವಿನಿಂದ ಅವುಗಳೆಲ್ಲವೂ ನನಗೆ ಅಪ್ರಿಯವಾದವು. ಹೂವಿನ ತೋಟಗಳು, ಲತಾಮಂಟಪಗಳು, ಸುಂದರವಾದ ಚಿತ್ರಗಳು, ಮಧುರವಾದ ಗಾಯನ, ರುಚಿಕರವಾದ ಭಕ್ಷ್ಯಗಳು ಒಂದೂ ಬೇಡವಾಯಿತು. ಯಾರಿಗಾಗಿ ನಾನವುಗಳ ಸುಖವನ್ನನುಭವಿಸಲಿ? ಸುಗಂಧವಾದ ಗುಲಾಬಿಯ ರಚನೆಯನ್ನು ಮೆಚ್ಚಿ ಅದರ ಬಣ್ಣಕ್ಕೆ ಬೆರ

ಗಾಗಿ ನಾನು, ತಂದು, ಅವಳ ಕೈಯಲ್ಲಿಟ್ಟೊಡನೆಯೇ, ಮುಡಿದು, ನನ್ನ ಶ್ರಮೆಯನ್ನು ಸಾರ್ಥಕಗೊಳಿಸುತ್ತಿದ್ದ ದೇವತೆಯೇ ಇಲ್ಲದ ಮೇಲೆ! ಇದ್ದ ಸ್ವಲ್ಪ ಆಸ್ತಿಯನ್ನು ಮಾರಿ ದೇಶಾಟನೆಗೆ ಹೊರಟೆನು. ರಾಮೇಶ್ವರದಿಂದ ಕಾಶಿಯ ವರೆಗೆ ಸುತ್ತಿದೆನು. ಹತ್ತಾರು ಭಾಷೆಗಳನ್ನು ಕೇಳಿದೆನು. ನೂರಾರು ಜನಗಳನ್ನು ನೋಡಿದೆನು. ಆದರೇನು! ಒಂದರಲ್ಲಿಯೂ ಜೀವವೇ ಇದ್ದಂತೆ ತೋರಿಬರಲಿಲ್ಲ.

ಹೀಗೆ ಹತ್ತಾರು ವರ್ಷ ಸುತ್ತಿ ಸುತ್ತಿ ಬೇಸತ್ತು ಅವಳಿದ್ದಲ್ಲಿಗೇ ಬಂದೆನು. ಹೃದಯದಲ್ಲಿ ಆರಿದ್ದ ಬೆಂಕಿಯನ್ನು ಪುನಃ ಹೊತ್ತಿಸಿದಂತಾಯಿತು. ಅವಳಿದ್ದ ಜಾಗ, ಅವಳಂದ ಮಾತುಗಳು, ಅವಳು ನೋಡಿದ ಬಗೆ, ಅವಳ ನಗು, ಅಳು, ಕೋಪ—ಇತರ ಭಾವಗಳು—ಇವುಗಳೇ ಬಾರಿ ಬಾರಿಗೂ ಜ್ಞಾಪಕಕ್ಕೆ ಬಂದು ನನ್ನ ಪ್ರಾಣವನ್ನೇ ಹಿಂಡುತ್ತಿದ್ದವು. ಚಿಂತಿಸುತ್ತಿದ್ದಂತೆಯೇ ಸರೋಜನ ನೆನಪುಂಟಾಯಿತು. ನೋಡಿಬರಲು ಹೊರಟೆ. ಅದೇ ಊರಿಗೇ ಬಂದೆನು. ಅದೇ ಜನಗಳೇ-ಅದೇ ಮನೆಗಳೇ! ಆದರೂ, ಅಂದು ಬಂದಿದ್ದಾಗಿದ್ದ ಕಳೆಯು ಮಾತ್ರ, ಇಂದು ಇಲ್ಲದಂತಾಗಿತ್ತು. ಏನಿದು ವಿಚಿತ್ರ? ನಮಗೆ ಬೇಕಾದ ವಸ್ತುವೊಂದಿದ್ದರೆ ಜಗತ್ತು ಸುಖಮಯ; ಅದು ಇಲ್ಲವಾದರೆ ಜಗತ್ತು ದುಃಖಮಯವಾಗುವುದೇ? ಒಂದು ವಸ್ತುವಿನಲ್ಲಿ ಅಂತಹ ಅಪಾರ ಶಕ್ತಿಯಿರುವುದೇ?

ನಮ್ಮ ಸರೋಜನ ಮನೆಯ ಬಳಿಗೆ ಬಂದೆನು. ಯೌವನವು ತಲೆದೋರಿ ದೇಹದ ಪ್ರತಿಯೊಂದು ಭಾಗದಲ್ಲಿಯೂ ಚಿಮ್ಮುತ್ತಿದ್ದಿತು. ಅದೇ ಗುಂಗುರು ಗುಂಗುರು ಕೂದಲು, ಅದೇ ಬಟ್ಟಮುಖ—ಅದೇ ಬೊಗಸೆಗಂಗಳು—ಸರೋಜ—ಕೊನೆಗೂ ನಿನ್ನನ್ನು ಕಂಡೆನೇ ಎಂದು ಹಿರಿಹಿಗ್ಗಿದೆನು. ಕ್ಷಣಕಾಲ ಯೋಗಕ್ಷೇಮವಾಯಿತು. ಸರೋಜನ ಬಳಿಯಿದ್ದಷ್ಟೂ ಅಂದಿನ ದಿನದ ನೆನಪೇ ಬಂದು ಮನಸ್ಸನ್ನು ಕಲಕುತ್ತಿದ್ದಿತು. ಹಾ! ಹಾ! ಬಹು ದುಃಖದಿಂದ ಅವಳ ನಾಮಾಂಕಿತವಾದ ಒಂದುಂಗುರವನ್ನು ಸರೋಜನಿಗಿತ್ತು ಹೊರಟೆನು. ಒಂದೆರಡು ದಿನವಿರೆಂದು ಬಲವಂತಪಡಿಸಿದಳು, ಹೃದಯ ಒಡಂಬಡಲಿಲ್ಲ. ಹೊರಟೆನು.

ಎಲ್ಲಿಗೆ ? ಮುಂದಿನ ಊರಿಗೆ. ಇದ್ದವನಿಗೊಂದೂರು, ಕೊಂಡವನಿಗೊಂದು ಮನೆ, ನನಗೇನು, ಪ್ರಪಂಚವೆಲ್ಲಾ ನನ್ನದೇ. ಪುನಃ ಊರೂರು ಸುತ್ತಲು ಮೊದಲು ಮಾಡಿದೆನು.

೬

ನನ್ನ ಬದುಕಿನಲ್ಲಿ ಗುರಿಯಿರಲಿಲ್ಲ ಬಾಳಿನಲ್ಲಿ ಆಸೆಯಿರಲಿಲ್ಲ. ಜೀವ ಧರಿಸಿರುವುದೇ ಒಂದು ಭಾರವಾಗಿದ್ದಿತು ಹೋದ ಹೋದ ಕಡೆಗಳಲ್ಲಿ ಮಕ್ಕಳ ಗುಂಪಿನೊಂದಿಗೆ ಬೆರೆತು, ಹಾಡುಕಥೆಗಳಿಂದ ಅವರುಗಳ ಮನಸ್ಸನ್ನು ಸಂತೋಷಗೊಳಿಸುತ್ತ ಕಾಲಹಾಕುತ್ತಿದ್ದೆನು. ಯಾರಾದರೂ ಹೊತ್ತಿಗಿಷ್ಟು ಅನ್ನಹಾಕುತ್ತಿದ್ದರು. ಗಾಡಿಯವರು ಒಂದಿಷ್ಟು ಸ್ಥಳ ಕೊಡುತ್ತಿದ್ದರು. ಈ ಬಾಳಿನಲ್ಲಿ ಮನಸ್ಸಿನ ದುಃಖವನ್ನು ನೀಗಿಕೊಳ್ಳಲು ಪ್ರಯತ್ನಿಸುತ್ತಿದ್ದೆ. ಆಡುವ ಮಕ್ಕಳೊಂದಿಗೆ ಗೋಲಿಯಾಡುವೆ, ಹೆಂಗಳೆಯರೊಂದಿಗೆ ನೀರುಹೊರುವೆ, ರಾಗಿ ಬೀಸುವೆ, ರಂಗವಲ್ಲಿ ಇಡುವೆ, ಬೆಳೆದವರೊಂದಿಗೆ ಹೊಲ ಉಳುವೆ, ನೇಯುವೆ, ನೂಲುವೆ. ಮನಸ್ಸಿಗೆ ತೋರಿದ, ಕೈಬಳಿಗೆ ಬಂದೆಲ್ಲ ಕೆಲಸಗಳನ್ನು ಮಾಡಿಕೊಡುತ್ತಿದ್ದೆ.

ಹೀಗೆ ಸುಮಾರು ೨೦-೨೨ ವರ್ಷಗಳನ್ನು ಕಳೆದೆನು. ಒಂದು ದಿನ ಶ್ರೀರಂಗ ಪಟ್ಟಣದಲ್ಲಿ ಕಾವೇರಿಯ ತೀರದಲ್ಲಿ ಹರಿಯುವ ನೀರಿನ ಝರಿಗಳನ್ನು ನೋಡುತ್ತ ಮುಳುಗುವ ಸೂರ್ಯನ ಪ್ರತಿಬಿಂಬವನ್ನು ನೋಡುತ್ತ ಕುಳಿತಿದ್ದೆನು. ಹಾಡುವ ಎಂದೆನಿಸಿತು, ಆ ನಿಸರ್ಗದ ಸೊಬಗನ್ನು ನೋಡಿ, ನನ್ನಿಂದ ಪಾಲು ಪಡೆಯಲು ಅವಳಿದ್ದರೆಷ್ಟು ಚೆನ್ನಾಗಿರುತ್ತಿತ್ತು ಎಂದೆನಿಸಿತು ! ಹಾಡಲಾರಂಭಿಸಿದೆ; ಕಾನಡ ರಾಗಕ್ಕೆ ಎಳೆದೊಯ್ಯಿತು. ವಿರಹದ ದುಃಖವೊಂದು ಕಡೆ, ಶೃಂಗಾರದ ಸುಖವೊಂದುಕಡೆ, ನನಗೆ ಮೈಮೇಲಿನ ಪ್ರಜ್ಞೆಯೇ ಹೋಗಿದ್ದಿತೋ ಏನೋ ? ಕಣ್ಣುಬಿಟ್ಟು ನೋಡುವಲ್ಲಿ ಸುತ್ತಲೂ ಜನರು ಕುಳಿತು ಕೇಳುತ್ತಿದ್ದರು. ಬಟ್ಟೆಯೆಲ್ಲವೂ ನೆನೆದಿದ್ದವು, ನನಗೆ ಬಹು ನಾಚಿಕೆಯಾಯಿತು. ಮುಂದಿನೂರಿಗೆ ಆಗಲೇ ಹೊರಟೆ. ಮದ್ದೂರಿಗೆ ಹೋಗುತ್ತಿದ್ದ ಗಾಡಿಯೊಂದು ಸಿಕ್ಕಲು, ಸರೋಜನನ್ನು ನೋಡುವ ಆಸೆಯೂ ಹುಟ್ಟಿತು. ಹೊರಟೆ.

ಮನೆಯು ಇದ್ದೆಡೆಯಲ್ಲೇ ಇದ್ದಿತು. ಹೊರಕ್ಕಿನ್ನೂ ಚೆನ್ನಾಗಿ ಕಾಣು ತ್ತಿದ್ದಿತು. ಮನೆಯ ಬಾಗಿಲನ್ನು ತಟ್ಟಲು, ವಯಸ್ಸಾದ ಒಬ್ಬಾಕೆಯು ಹೊರಕ್ಕೆಬಂದಳು. ನಾನು ವಿನಯದಿಂದ "ಸರೋಜ ಮನೆಯಲ್ಲಿದ್ದಾಳೆಯೇ?" ಎಂದೆನು. ಆಕೆಯು ತಿರಸ್ಕಾರದಿಂದ ಯಾವ ಸರೋಜ ಎಂದು ಕೇಳಲು ಹಿಂದಿನ ಕಥೆಯನ್ನೆಲ್ಲಾ ವಿವರಿಸಿದೆನು ಆಕೆಗೆ ನನ್ನ ಕಥೆಯಲ್ಲಿ ಕನಿಕರವೇ ಹುಟ್ಟಲಿಲ್ಲವೆಂದು ಕಾಣುತ್ತದೆ. ಉಪೇಕ್ಷೆಯಿಂದ ನನ್ನ ಮುಖದ ಮೇಲೆ ಬಡಿಯುವಂತೆ ಕದವನ್ನು ಹಾಕಿಕೊಂಡು ಹೊರಟುಹೋದಳು. ಸಪ್ಪೆಮುಖವನ್ನು ಹಾಕಿಕೊಂಡು ಹೊರಕ್ಕೆ ಬರುತ್ತಿರಲು, ಯಾವನೋ ಒಬ್ಬ ಪುಣ್ಯಾತ್ಮನು ಸರೋಜನ ಮನೆಯವರಿಲ್ಲಿಲ್ಲವೆಂದೂ, ಕೋಟೆಯಲ್ಲಿರುವ ಶಾನುಭೋಗ ರಾಮಣ್ಣನವರು ಸರೋಜನ ಬಂಧುಗಳೆಂದೂ ತಿಳಿಸಿದರು.

ರಾಮಣ್ಣನವರ ಮನೆಯನ್ನು ಸುಲಭವಾಗಿ ಗೊತ್ತುಮಾಡಿದೆನು. ನನ್ನ ಅದೃಷ್ಟಕ್ಕೆ ಅವರೇ ಮನೆಯಲ್ಲಿದ್ದು, ನನ್ನನ್ನು ಬಹು ಮರ್ಯಾದೆಯಿಂದ ಬರಮಾಡಿಕೊಂಡರು. ಉಪಾಹಾರಾದಿಗಳಾದುವು. ನನ್ನ ಹಿಂದಿನ ಕಥೆಯನ್ನು ಕೇಳಿ, ರಾಮಣ್ಣನವರು ಚಕಿತರಾಗಿ

"ಏನು, ಸುಮಾರು ೨೦-೨೨ ವರ್ಷಗಳ ಹಿಂದೊಂದು ಸಾರಿ ತಾವೇ ಬಂದು ಒಂದುಂಗುರವನ್ನು ಸಹಿತ ಕೊಟ್ಟು ಹೋದಿರಾ"

ನಾನು ಹೌದೆಂದೆನು.

ರಾಮಣ್ಣನವರು ಹೆಚ್ಚು ಆಶ್ಚರ್ಯಚಕಿತರಾಗಿ "ನೀವು ಮಹಾರಾಯರಪ್ಪಾ—ನಿಶ್ಚಲ ಪ್ರೇಮವೆಂದರೆ, ನಿಮ್ಮದೇ-ಆದರೆ, ಕೇಳಿ, ನೀವು ಉಂಗುರ ಕೊಟ್ಟುದು ಸರೋಜನಿಗಲ್ಲ - ಮತ್ತಾರಿಗೋ"

ನನಗಾಶ್ಚರ್ಯವಾಯಿತು "ಅದು ಹೇಗೆ ಸ್ವಾಮಿ" ಎಂದೆನು

ರಾಮಣ್ಣನವರು "ಈಗ ೩೦-೩೨ ವರ್ಷಗಳ ಹಿಂದೆ ತಾವೂ ತಮ್ಮ ಕುಟುಂಬ ಬಂದಿದ್ದಿರಲ್ಲಾ, ಆಗಿದ್ದವಳು ಸರೋಜನೇ ನಿಜ. ಆ ಮಗು ನನ್ನ ಷಡ್ಡಕನದು ಅಂಗರೆ ಸರೋಜನ ತಾಯಿ, ಮತ್ತು ನನ್ನ ಕುಟುಂಬ, ಇಬ್ಬರೂ ಅಕ್ಕತಂಗಿಯರು ತಿಳಿಯಿತೇ—ನೀವು ಬಂದು ಹೋದ ಮಾರನೆಯ ವರ್ಷವೇ ಮಗು ತೀರಿಕೊಂಡಿತ್ತು, ಮನೇನ ಬಾಡಿಗೆಗೆ ಕೊಟ್ಟು

ತಾಯ್ತಂದೆಗಳು—ಎಡತೊರೆಗೆ ಹೊರಟುಹೋದರು. ಬಾಡಿಗೆಗೆ ಬಂದಿದ್ದವರ ಯಾವದೋ ಹುಡುಗಿಯನ್ನು ನೀವು ಸರೋಜಾ ಎಂದು ತಿಳಿದುಕೊಂಡಿರಿ'' ಎಂದರು.

ಎದೆಯು ಝಲ್ಲೆಂದಿತು. ಬಾಯಲ್ಲಿ ಮಾತೇ ಹೊರಡಲಿಲ್ಲ. ಸರೋಜನೂ ತೀರಿಹೋದಳೇ? ಆದರೂ ಅವಳ ನೆನಪು ಮಾತ್ರ ಹಳೆಯದಾಗಿ ಅಳಿದು ಹೋಗದೆ ನನ್ನೊಂದಿಗೇ ಬರುತ್ತಿದೆಯಲ್ಲಾ! ಇದಲ್ಲವೇ ದೈವ ಲೀಲೆ !!!

---

# ಶ್ರೀಪತಿ ಕಲ್ಯಾಣ.

೧

ನಾಟಕಕ್ಕೆ ಹೋಗುವುದಕ್ಕೆ ರಾಮೂನ ಒಪ್ಪಿಸುವುದೆಂದರೆ ಈರುಳ್ಳಿ ಹುಳಿ ಮಾಡುವುದಕ್ಕೆ ಅಜ್ಜಿಯನ್ನು ಒಪ್ಪಿಸುವುದೆಷ್ಟು ಸುಲಭವೋ ಅಷ್ಟೇ ಸುಲಭಸಾಧ್ಯ! ನಾನೂ, ರಾಮೂನೂ ಬಾಲ್ಯ ಸ್ನೇಹಿತರು; ಒಂದೇ ಕಡೆ ಹುಟ್ಟಿ ಬೆಳೆದವರು, ಒಂದೇ ಸ್ಕೂಲು ಸೇರಿ ಟೊಳ್ಳುಗಟ್ಟಿಯು ಗುಂಡೂ ಸುಬ್ಬುಹಾಗೆ ಕಷ್ಟಸುಖ ಅನುಭವಿಸಿದವರು. ಮೊದಲಿನಿಂದಲೂ ರಾಮೂಗೆ ಸಂಗೀತ ಎಂದರೆ ಪಂಚಪ್ರಾಣ. ಕೇಳಿಕೇಳಿ ಅವನೂ ಸ್ವಲ್ಪ ಹಾಡಲು ಕಲಿತಿದ್ದ. ಶಾರೀರ ಸಂಪತ್ತಿ ಚೆನ್ನಾಗಿದ್ದಿತು. ಹಾಡಿನ ಅರ್ಥ ತಿಳಿದು ಅನುಭವಿಸಿಕೊಂಡು ಹಾಡುತ್ತಿದ್ದ. ಇನ್ನು ಕೇಳುವುದಕ್ಕೆ ಚೆನ್ನಾಗಿರದೆ ಇರುತ್ತದೆಯೇ? ರಾಮೂಗೆ ಸಂಗೀತ ಎಂದರೆ ಹೇಗೋ ನನಗೆ ನಾಟಕ ಎಂದರೆ ಹಾಗೆ. ಬೈಲು ನಾಟಕ ಮೊದಲ್ಗೊಂಡು ವರದಾಚಾರ್ಯರ ಕಂಪೆನಿ ನಾಟಕಗಳ ವರೆಗೂ ಸರಿ, ನೋಡದೆ ಬಿಡುತ್ತಿರಲಿಲ್ಲ ನಾನು ಬೆಂಗಳೂರು ಬಿಟ್ಟು ಹಳ್ಳಿ ಸೇರಿದಾರಭ್ಯ ನಾಟಕಕ್ಕೆ ಹೋಗುವುದು ಹೆಚ್ಚುಕಡಿಮೆ ನಿಂತೇ ಹೋಯಿತು; ಎಂದು ಹೇಳಬಹುದು. ಜಾತ್ರೆ ಗೀತ್ರೆ ಬಂದರೇ ಕಂಪೆನಿಗಳ ದರ್ಶನ. ಆಗಲಾದರೋ ಹೋಗೋಣ ವೆಂದು ಸಂಕಲ್ಪ ಮಾಡಿಕೊಂಡು, ಮುಡುಪಿನ ಅರಿಶಿನ ಬಟ್ಟೆ ಚೂರುಗಳ ನ್ನೆಲ್ಲಾ ಬಿಚ್ಚಿ, ಎಲ್ಲಾ ಸಿದ್ಧಮಾಡಿಕೊಂಡರೂ, "ಏನು ಹಾಳು ನಾಟ ಕವೋ?" ಎಂದು ರಾಮು ಶಕುನ ನುಡಿದು ಬಿಟ್ಟರೆ ನೀರಿನಲ್ಲಿ ಹೋಮ ಮಾಡಿದಹಾಗಾಗುತ್ತಿದ್ದಿತು. ಈಗ ನಮ್ಮೂರಿಗೆ ಮೈಸೂರಿನ "ರಸಿಕ ಮನೋಹರ ನಾಟಕ ಮಂಡಳಿ"ಯವರು ಬಂದು ಸುಮಾರು ಒಂದು ತಿಂಗ ಳಿನಿಂದಲೂ ತಾಲೂಕು ಕಛೇರಿ ಪಕ್ಕದಲ್ಲೊಂದು ಚಪ್ಪರ ಹಾಕಿಕೊಂಡು ನಾಟಕವಾಡುತ್ತಿದ್ದಾರೆ. ರಾಮೂನ ಆಡಚಣೆಯಿಂದ ನಾನು ಹೋಗುವು

ದಕ್ಕೇ ಆಗಿರಲಿಲ್ಲ. ಊರೂರೇ ಹೋಗಿ ಬಂದು “ಕೃಷ್ಣಲೀಲೆ ಹಾಗಿತ್ತು, ಕಂಸವಧೆ ಹೀಗಿತ್ತು, ರತ್ನಾವಳಿ ನೋಡದೇ ಇದ್ದ ಮೇಲೆ ಕಣ್ಣಿದ್ದು ಏನು ಸಾರ್ಥಕ” ಎಂದು ಹೇಳುತ್ತಿದ್ದುದನ್ನು ಕೇಳಿದಾಗ ನನ್ನ ಹೊಟ್ಟೆಗೆ ಬೆಂಕಿಬಿದ್ದಂತಾಗುತ್ತಿದ್ದಿತು. ರಥಸಪ್ತಮಿ ಬಂತು. ಅಂದು ಮಂಡಳಿಯ ವರು “ಸುಭದ್ರಾಕಲ್ಯಾಣ” ಆಡುತ್ತೇವೆಂದು ಡಂಗುರ ಸಾರಿದರು. “ಆದದ್ದಾಗಲಿ, ರಾಮೂನ ಒಪ್ಪಿಸುವುದಕ್ಕೆ ಪ್ರಯತ್ನಿಸುವುದು, ಸಾಧ್ಯ ವಾಗದಿದ್ದರೆ ನಾನಾದರೂ ಹೋಗಿಬಿಟ್ಟೇ ಬರುವುದು” ಎಂದು ನಿರ್ಧರಿಸಿ ಕೊಂಡು ಅವನ ಮನೆಗೆ ಹೋದೆ.

ರಾಮೂಗೆ ಹಗಲೆಂದರೆ ರಾತ್ರಿ; ರಾತ್ರಿಯೆಂದರೆ ಹಗಲು. ಅವನ ವಿಶ್ರಾಂತಿ, ನಿದ್ದೆ ಎಲ್ಲಾ ಹಗಲಲ್ಲೆ ಮುಗಿಯಬೇಕು. ರಾತ್ರಿ ವ್ಯಾಸಂಗ, ಬರವಣಿಗೆ ನಿರಾತಂಕವಾಗಿ ಸಾಗಬೇಕು. ನಾನು ಹೋದಾಗ ಲಕ್ಷಣ ವಾಗಿ ಹಾಸಿಗೆ ಹಾಸಿಕೊಂಡು, ಕಂಬಳಿಯ ಜೊತೆಗೊಂದು ಪಂಚೆಯನ್ನೂ ಜೋಡಿಸಿ, ಮುಸುಕಿಹಾಕಿ ಹೊದೆದುಕೊಂಡು ಗೊರಕೆ ಹೊಡೆಯುತ್ತ ಮಲಗಿದ್ದನು. ಕುಂಭಕರ್ಣನನ್ನಾದರೂ ಸುಲಭವಾಗಿ ಎಬ್ಬಿಸಬಹುದು. ರಾಮೂನ ಎಬ್ಬಿಸುವುದಕ್ಕೆ ಆಗುತ್ತಿರಲಿಲ್ಲ. ಅದಕ್ಕೆ ನಾನು ಮುಸುಕೆ ಳೆದು ತಂಬಿಗೆಯಲ್ಲಿದ್ದ ನೀರನ್ನು ಮುಖದಮೇಲೆ ಸುರಿದೆ. ಭೂಪ ಕಣ್ಣು ತೆರೆದ; ಪಂಚೆಯಿಂದ ಒರಸಿಕೊಳ್ಳುತ್ತಾ “ಏನೋ ನೀರು—ಮಳೆ ಬರು ತ್ತಾಯಿದೆಯೇನೋ” ಎಂದು ಎದ್ದ. ಎಲ್ಲಿ ಕೋಪಮಾಡಿಕೊಂಡು ಬಂದ ಕೆಲಸಕ್ಕೆ ವಿಘ್ನ ಉಂಟುಮಾಡುತ್ತಾನೋ ಎಂದು ಚಿಂತಿಸಿದೆ. ಸದ್ಯಃ ನನ್ನ ಅದೃಷ್ಟ ಚೆನ್ನಾಗಿದ್ದಿತು. ಒಳಗೆ ಹೋಗಿ ಕಾಫಿ ಉಪ್ಪಿಟ್ಟುಗಳನ್ನು ತಂದು ಮುಂದಿಟ್ಟನು. ಮಾಮೂಲಿನ ಫಲಾಹಾರವಾದ ಮೇಲೆ ನಾನು ಪ್ರಸ್ತಾಪವೆತ್ತಿದೆ.

“ರಾಮೂ, ಇವತ್ತು ರಸಿಕರು “ಸುಭದ್ರಾಕಲ್ಯಾಣ” ಮಾಡುತ್ತಾ ರಂತೋ! ನಿನಗೂ ನನಗೂ ಲಗ್ನಪತ್ರಿಕೆ ಬಂದಿದೆ?”

“ಸುಭದ್ರೆಗೆ ಕಲ್ಯಾಣವಾದರೇನು? ಸೀತೆಗೆ ಕಲ್ಯಾಣವಾದರೇನು? ನಿನಗೂ ನನಗೂ ಯಾತಕ್ಕಾಯೋಚನೆ? ನಡೀ ಸುಖವಾಗಿ! ತಾವರೆ ಕೊಳದ ಕಡೆ ವಾಕಿಂಗ್ ಹೋಗೋಣ.”

" ನಿತ್ಯ ಹೋಗಿಬಂದು ಊರೂರೇ ಹೊಗಳಿದರೂ, ನಾವು ಒಂದು ದಿವಸವಾದರೂ ಹೋಗಲೇಬೇಡವೇ ? "

"ಏನು, ಹೋಗಬೇಕೂ ಎನ್ನುವುದೇನು ಗ್ರಹಚಾರವೇ ? ಊರಿಗೆ ಬುದ್ಧಿಯಿಲ್ಲ—ಕುರಿಗಳಾಗಿ ಹಾಗೆ ಹೋಗುತ್ತಾರೆ. ವಿವೇಕವಿಲ್ಲದೆ ಆವರೊಂದು ಹಳ್ಳಕ್ಕೆ ಬಿದ್ದರೆ ನಾವೂ ಬೀಳಬೇಕೆ? ಅಷ್ಟು ಆಸೆಯಿದ್ದರೆ ನೀನು ಬೇಕಾದರೆ ಹೋಗಿಬಿಟ್ಟು ಬಾ, ನನ್ನ ಪ್ರಾಣ ಯಾತಕ್ಕೆ ಹಿಂಡುತ್ತಿ ? "

" ಈ ವಕ್ರಬುದ್ಧಿ ನೀನು ಬಿಡೋ ಹಾಗೇ ಇಲ್ಲ; ಒರಟು ಜವಾಬು ಕೊಡದೇ ಇದ್ದರೆ ತಿಂದ ಉಪ್ಪಿಟ್ಟು ಮೈಗೆ ಹತ್ತೋದೇ ಇಲ್ಲವೇನೋ ಪಾಪ! ಮೊನ್ನೆ ಆ ದೊಣ್ಣೆ ಭಾಗವತನ ಅಪಸ್ವರ ಸಂಗೀತಕ್ಕೆ ಮಾತ್ರ ನಾನು ನಿನ್ನ ಜೊತೆ ಬರಬಹುದು. ನೀನು ಮಾತ್ರ ಬರಬಾರದೇನೋ ? "

"ಕೋಪಮಾಡಿಕೊಳ್ಳಬೇಡ, ಕಿಟ್ಟೂ ! ನಾಟಕಗಳು ಎಂದರೆ ನನಗೆ ತಲೆ ಬೇಜಾರು, ಯಾಕೆಂದರೆ, ಅವು ನಾಟಕಕ್ಕೆ ನಾಟಕಗಳಲ್ಲ ; ಸಂಗೀತಕ್ಕೆ ಸಂಗೀತವಲ್ಲ—ಆದ್ದರಿಂದ—"

" ಆದ್ದರಿಂದ ಗೀದ್ದರಿಂದ ಈ ಕಣೀಯೆಲ್ಲಾ ಬಿಟ್ಟು ಇವತ್ತು ನನ್ನ ಜೊತೆ ಬರಲೇಬೇಕು. ಸ್ವಲ್ಪ ನನ್ನ ಮಾತು ಕೇಳು. ಈ ಕಂಪೆನಿಯಲ್ಲಿ ಯಾವನೋ ನಾಗರಾಜರಾಯನಂತೆ! ಬಹು ಸೊಗಸಾಗಿ ಹಾಡುತ್ತಾನಂತೆ! ಕಮಲಾಂತ ಒಬ್ಬಳು ನಟಿಯಿದ್ದಾಳಂತೆ—ಅವಳ ಕಂಠ ಕೋಗಿಲೆ ಕಂಠವೇ ಅಂತೆ—ಇಬ್ಬರೂ ಶಾಸ್ತ್ರೋಕ್ತವಾಗಿ ಹಾಡಬಲ್ಲವರಂತೆ; ಹಿಂದುಸ್ಥಾನಿ ವರೇಖುಗಳು ಹೇರೆ ಹಚ್ಚುತ್ತಾರಂತೆ. ಇಷ್ಟರ ಮೇಲೆ ನಿನ್ನಿಷ್ಟ."

ರಾಮು ಕ್ಷಣಕಾಲ ಚಿಂತಿಸಿದ, ಕೆಲ್ಲಾಗ್ ಪೀಸ್ ಪ್ಯಾಕ್ಟಿಗೆ (Kellogg Peace Pact) ರುಜು ಹಾಕುವಾಗ ಮುಸ್ಸೊಲಿನಿ (Mussolini) ಕೂಡ ಅಷ್ಟು ಗಂಭೀರವಾಗಿ ಚಿಂತಿಸಿದ ಹಾಗೆ ಕಾಣಲಿಲ್ಲ. ಕೊನೆಗೆ,

" ಊ, ನಡಿಯಪ್ಪಾ ! ನಿನ್ನ ಮನಸ್ಸು ಯಾತಕ್ಕೆ ನೋಯಿಸಲಿ. ಆದರೆ ಒಂದು ಕರಾರು—ನಾಟಕ ಚೆನ್ನಾಗಿಲ್ಲದಿದ್ದರೆ ನಾನು ಬಂದುಬಿಡುತ್ತೇನೆ." ಕರಾರಿಗೆ ವಿಧಿಯಿಲ್ಲದೆ ಒಪ್ಪಿದೆ.

೨.

ನಾಟಕವನ್ನು ನೋಡಿಕೊಂಡು ಇಬ್ಬರೂ ಮನೆಗೆ ಬರುತ್ತಿದ್ದೆವು. ಮಧ್ಯರಾತ್ರಿ. ಎಲ್ಲೆಲ್ಲಿಯೂ ನಿಶ್ಶಬ್ದ. ನಿಶಿಯೇ ನೀರವತೆಯಲ್ಲಿ ಮಗ್ನಳಾಗಿದ್ದಾಳೆಯೋ ಎನ್ನುವ ಹಾಗಿತ್ತು. ಹಾಲು ಚೆಲ್ಲಿದಂತಿದ್ದ ಬೆಳದಿಂಗಳು; ನಗುಮೊಗದಿಂದ ಪ್ರಕಾಶಿಸುತ್ತಿದ್ದ ಚಂದ್ರ; ತಂಪಾಗಿ ಬೀಸುತ್ತಿದ್ದ ಗಾಳಿ; ಇದರೊಂದಿಗೆ ನಾಟಕದ ಸೌಖ್ಯದ ಪ್ರಮೋದಭಾವ; ರಾಮು ಮೆಲ್ಲಗೆ ಹಾಡಿಕೊಳ್ಳುತ್ತ ಬರುತ್ತಿದ್ದನು. ನಾಟಕಕ್ಕೆ ಹೋಗುವಾಗಿದ್ದ ಜುಗುಪ್ಸೆಯೂ ನಿರುತ್ಸಾಹವೂ ಈಗ ಅಳಿದು ಸಂತಸಕ್ಕಾಸ್ಪದ ಕೊಟ್ಟಿತ್ತು. ಸ್ವಲ್ಪ ಹೊತ್ತಿನ ಮೇಲೆ ನಾನು.

"ರಾಮೂ, ನಾಟಕ ಹೇಗಿತ್ತೋ? ಸಂಗೀತದ ಸೀಕರಣೆಯೇನಾದರೂ ಸಿಕ್ಕಿತೋ?"

"ಪರವಾಗಿಲ್ಲ ಇಷ್ಟರ ಮಟ್ಟಿಗಿರುತ್ತೆ ಎಂದು ನಾನು ಭಾವಿಸಿರಲಿಲ್ಲ. ನಾಗರಾಜ ರುಸ್ತುಂ ಹಾಡುತ್ತಾನೋ. ಅವಳೂ ಪರವಾಗಿಲ್ಲ. ಆದರೆ ತಾಳಜ್ಞಾನ ಸಾಲದು. ಶಾರೀರ ಚೆನ್ನಾಗಿದೆ. ನಿನಗೆ ಹೇಗಿತ್ತು ಹೇಳು."

"ನೀನೇ ಪರವಾಗಿಲ್ಲ ಎಂದ ಮೇಲೆ ಇನ್ನು ನನ್ನ ಕೇಳುವುದೇನು?"

"ಹಾಗಲ್ಲ. ನಾನು ಸಂಗೀತಾಚಾರ್ಯ! ನೀನು ಅಭಿನಯ ವಿಮರ್ಶಕವರೇಣ್ಯ; ಇಬ್ಬರೂ ಸೇರಿದರೆ ಫಲ-ಸೊನ್ನೆ!"

"ರಾಮೂ! ನಮ್ಮರಮನೆಯಲ್ಲಿ ಮಾಮೂಲಾಗಿ ಕೊಡುತ್ತಿರೋ ಬಿರುದಾವಳಿಗಳೆಲ್ಲಾ ಹಳೇವಾಗಿ ಹೋಯಿತು. ನೀನೊಂದು 'ಅಪ್ಲಿಕೇಶನ್' ಹಾಕಿಕೊಂಡು ಹೊಸಹೊಸದಾಗಿ ತಯಾರುಮಾಡಿ ಕೊಡಬಾರದೇ?"

"ಸಾಕು ನಿಲ್ಲಿಸೋ ನಿನ್ನ ಕಂತೆಪುರಾಣ. ನಾಟಕ ಹೇಗಿತ್ತು ಹೇಳೋ?—ಸುಭದ್ರೆಯನ್ನ ಸಂಧಿಸಿದಾಗ ಅರ್ಜುನ "ಯದುಕುಲ ಕಾಂಬೋದಿ"ಯಲ್ಲಿ ಒಂದು ಕಂದ ಹೇಳಿದ. ಜ್ಞಾಪಕ ಇದೆಯೋ? ಏನಂದನೋ ಅದನ್ನ"—

"ಕೋಣನ ಮುಂದೆ ಕಿನ್ನರಿ ಬಾರಿಸಿದ ಹಾಗೆ ನನ್ನ ಕೇಳಿದರೆ ಏನು ಹೇಳಲಿ ರಾಮು? ನೀನು ಸಂಗೀತ ಕೇಳಿದೆ. ನಾನು ಇತರ ವಿಚಾರ ನೋಡಿದೆ. ಅರ್ಜುನ ಸುಭದ್ರೆಯನ್ನು ಕಾಮಿಸಿ, ದೇವರ ಪೂಜೆಯ ನೆವ

ದಲ್ಲಿ ಅವಳ ತಲೆಯ ಮೇಲೆ ಹೂಹಾಕುತ್ತಾನೆ ನೋಡು ಅದು ಶುದ್ಧ ಆಭಾಸವಲ್ಲವೇ?—ಸನ್ಯಾಸಿಯಾದವನು ಹಾಗೆ ಮಾಡೋಣವೆಂದರೇನು?''

" ಸನ್ಯಾಸಿಗಳು ಮಾಡೋದೂ ಹಾಗೆ. ಅದು ಇರುವುದೂ ಹಾಗೇ, ಅದರಲ್ಲಿ ತಪ್ಪೇನು? ಇಷ್ಟಕ್ಕೂ ಆ ರಾವಣ ಸನ್ಯಾಸಿ ಅರ್ಜುನ ತಾನೆ.''

" ಏನೋಪ್ಪಾ ಹೆಂಗಳ್ಳನ್ನ ಮಹಾವೀರ ಎಂದು ಹೊಗಳುವುದು ಶುದ್ಧ ಅನ್ಯಾಯ.''

" ಗುರುವಿನಂತೆ ಶಿಷ್ಯ ಕಿಟ್ಟೀ! ಕೃಷ್ಣ ರುಕ್ಮಿಣಿ ಕದಿಯಲಿಲ್ಲವೇ? ಅರ್ಜುನ ಸುಭದ್ರೆಯನ್ನು ಕದ್ದ. ಇಂಗ್ಲಿಷಿನವರ ಲೆಕ್ಕಾಚಾರದಲ್ಲಿ ಇದಕ್ಕೆ ಎಲೋಪಮೆಂಟ್ (Elopement) ಎಂತಾರೆ ನೋಡು. ತಪ್ಪೇನೂ ಇಲ್ಲ. ಪರಸ್ಪರ ಅನುರಾಗ.''

" ಅದು ಸರಿ, ರಾಮು. ಇಂತಹ ನಾಟಕಗಳು ಜನಗಳ ಮನಸ್ಸಿನ ಮೇಲೆ ಏನು ಪರಿಣಾಮ ಉಂಟುಮಾಡುತ್ತೆ? ನೋಡು, ಒಂದು ವೇಳೆ ಮಿಸ್ ಮೇಯೋ ಏನಾದರೂ ಈ ನಾಟಕಕ್ಕೆ ಬಂದಿದ್ದರೆ!! ಅದೂ ಅಲ್ಲದೆ ಇಂತಹ ನಾರೀಚೌರ್ಯಗಳೆಲ್ಲಾ ಶುದ್ಧ ಕಟ್ಟು ಕಥೆ.''

" ಹಾಗೆನ್ನಬೇಡ ಕಿಟ್ಟೀ! ಇದು ಕಟ್ಟುಕಥೆಯಲ್ಲ. ಇಂಥವುಗಳು ಈಗಲೂ ನಡೆಯುತ್ತಿವೆ. ಮೊನ್ನೆ ತಾನೆ ಒಂದು ವಿಚಾರ ಕೇಳಿದೆ. ನಿನಗೂ ಹೇಳುತ್ತೇನೆ ಕೇಳು. ನಿನಗೆ 'ಶ್ರೀಪತಿ' ಗೊತ್ತೋ?''

" ಯಾವ ಶ್ರೀಪತಿ?''

" ಪ್ಲೀಡರು ಶ್ರೀಪತಿರಾಯರು ಬಿ. ಎ. ಕ್ರಿಮಿನಲ್ ಲಾಯರು.''

" ಓಹೋ! ಆ ಪುಣ್ಯಾತ್ಮನೇ! ಏನು? ಅವರನ್ನು ಬಹಳ ಬಲ್ಲವನಿಗಿಂತ ಹೆಚ್ಚಾಗಿ ಸಲಿಗೆಯಿಂದ " ಶ್ರೀಪತಿ'' ಎನ್ನುತ್ತೀ.''

" ಅದು ಸಮಾಜ ಸಂಪ್ರದಾಯ, ಬೇಡದಿದ್ದವರನ್ನು ಬಹು ವಿಶ್ವಾಸದಿಂದ ಏಕವಚನದಲ್ಲಿ ಕರೆಯುವುದು.''

" ಅವನನ್ನು ಕ್ರಿಮಿನಲ್ ಲಾಯರ್'' ಎನ್ನೋದಕ್ಕಿಂತ " ಕ್ರಿಮಿನಲ್ ಬ್ಯಾಂಕರ್'' ಅಂತ ಅಂದಿದ್ದರೆ ಹೆಚ್ಚು ಒಪ್ಪುತ್ತಿತ್ತು''

" ಯಾತಕ್ಕೆ?''

" ತಿಳಿದೂ ತಿಳಿದೂ ಯಾತಕ್ಕೇಂತ ಕೇಳುತ್ತೀಯಲ್ಲಾ ! ನವ
ಚನ್ನಕೇಶವನ ತಂದೆ ಸುಬ್ಬರಾಯರು, ಮಗಳ ಮದುವೆಗಾಗಿ ಶ್ರೀಪ
ಹತ್ತಿರ ಮೂರು ಸಾವಿರ ರೂಪಾಯಿ ಸಾಲ ತೆಗೆದುಕೊಂಡ ವಿಚಾ
ಗೊತ್ತೋ?"

" ಇಲ್ಲಪ್ಪಾ "

" ಮಹಾ ದಾಕ್ಷಿಣ್ಯದ ಮೇಲೆ ಶ್ರೀಪತಿ ಸಾಲ ಏನೋ ಕೊಟ್ಟ
ಬಡ್ಡಿ ಮಾತ್ರ ಶೇಕಡ ೧೮ರಂತೆಯೂ, ಎರಡು ವರ್ಷದೊಳಗಾಗಿ ತೀರಿಸಲೆ
ಬೇಕೆಂತಲೂ, ತಪ್ಪಿದಲ್ಲಿ ಶೇಕಡ ೨೪ರಂತೆ ಬಡ್ಡಿ ತೆರಬೇಕೆಂತಲೂ ಕಾಗ
ಪತ್ರವಾಯಿತು. ಇದು ಒಣಜಂಭದ ಪ್ರಭಾವ. ಸಾಲಸೋಲಮಾಡಿ, ಮ
ಹಾಳುಮಾಡಿಕೊಂಡು, ನಿತ್ಯ ಲಾಡು ಚಿರೋಟಿ ಫೇಣಿಮಾಡಿಸಿ ಧಾಂಧೂ
ಮದುವೆ ಮಾಡದೆಯಿದ್ದರೇನು ನಿಂತುಹೋಗಿತ್ತು!"

" ನೀನೇನೋ ಸುಲಭವಾಗಿ ಹೇಳಿಬಿಟ್ಟೆ ಕಿಟ್ಟ ! ಹೆಣ್ಣು ಹೆತ್ತವರಿ
ಗೊತ್ತು ಆ ಕಷ್ಟಸುಖ. ತಲೆ ಬೋಳಿಸಿಕೊಂಡು ಇಷ್ಟು ಮಾಡಿದರು
ಗೃಹಸೋಪಸ್ಕರ ಕಳುಹಿಸುವುದರಲ್ಲಿ ಅರ್ಧಪಾವು ರಾಗಿ ಕಡಿಮೆಯಾದ
ಗಂಡಿನವರ ಮುಖ ಗಡಿಗೆದಪ್ಪವಾಗುತ್ತದೆ. ಸಾಲದ್ದಕ್ಕೆ ವರದಕ್ಷಿ
ಗಲಾಟೆ ಹತ್ತಿಬಿಟ್ಟರಂತೂ ಮನೆ ಹಾಳೆ."

" ಸರಿ, ಮದುವೆಯೇನೋ ಮಾಡೋದು ಮಾಡಿಬಿಟ್ಟರು. ಸಾ
ತೀರಿಸುವಾಗಲ್ಲವೇ ಕಷ್ಟ ಕಾಣುವುದು ? ವಾಯಿದೆ ಮುಗಿಯುವ ಕಾ
ಬಂದರೂ, ಸುಬ್ಬರಾಯರು ಬಡ್ಡಿ ಹಣ ಕೂಡಾ ತೀರಿಸಿರಲಿಲ್ಲ. ಬಡ್ಡಿ
ಬೆಳೆದೂ ಬೆಳೆದೂ ಅಸಲಿನಷ್ಟೇ ಆಗಿ ಕುಳಿತಿತ್ತು. ಕೃಷ್ಣರಾಜೇಂದ್ರ ಮಿ
ನಲ್ಲಿ ಸುಬ್ಬರಾಯರಿಗೆ ೫೦ ಷೇರುಗಳಿದ್ದವು. ಅದೇ ಆಪನ್ನಿಧಿ. ಕಳೆ
ವರ್ಷ ಮಿಲ್ಲಿನ ನಷ್ಟ ಸರಿತೂಗಿಸಲು ಷೇರಿನ ಬೆಲೆ ಅರ್ಧಕ್ಕಿಳಿಸಿದರಲ್ಲಾ
ಅನರಲ್ಲಿ ಸುಬ್ಬರಾಯರಿಗೆ ಒಂದು ಒಂದೂವರೆ ಸಾವಿರದಷ್ಟು ಒಳಪ
ಬಂದಿತು. ಬಂದದ್ದು ಬರಲಿ ಎಂದು ಮಿಕ್ಕದ್ದನ್ನು ಮಾರಲಿಕ್ಕೆ ಹೊರಟ
ಹತ್ತು ರೂಪಾಯಿಗೂ ಕೇಳುವವರಿಲ್ಲದೆ ಹೋಯಿತು. ಇಂತಹ ವೇಳೇನೆ
ಕಾದುಕೊಂಡಿದ್ದ ಪುಣ್ಯಪುರುಷ—ಶ್ರೀಪತಿ ದಾವಾ ಹಾಕಿ ಡಿಕ್ರಿ ಮಾಡಿ
ಮನೆಯನ್ನು ಹರಾಜಿಗೆ ತಂದುಬಿಟ್ಟ ! ಹರಾಜೂ ಆಯಿತು. ಶ್ರೀಪತಿ ಕೈ

೫—೬|| ಸಾವಿರ ರೂಪಾಯಿಯೂ ಬಿತ್ತು ; ಸುಬ್ಬರಾಯರ ಮನೆಯೂ ಹಾಳಾಗಿಹೋಯಿತು. ಇದೇ ವ್ಯಸನದಲ್ಲಿಯೇ ಸುಬ್ಬರಾಯರು ತೀರಿಯೂ ಹೋದರು. ಈಗ ಪಾಪ! ಚನ್ನಕೇಶವ, ಸ್ಕೂಲುಬಿಟ್ಟು ಎಲ್ಲೋ ಒಂದು ಗುಮಾಸ್ತೆಗೆ ಸೇರಿಕೊಂಡು ಹೊಟ್ಟೆ ಹೊರೆಯುತ್ತಿದ್ದಾನೆ. ಕೇಳಿದೆಯಪ್ಪ ಶ್ರೀಪತಿ ಕಥೆ.''

"ನನಗಿದು ಗೊತ್ತೇ ಇರಲಿಲ್ಲವೇ ? ಮೊನ್ನೆ ಬಾಕಿ ವಸೂಲಿಗಾಗಿ ನಾನು ಕೃಷ್ಣರಾಜ ಪೇಟೆಗೆ ಹೋದೆ. ಶೇಕದಾರ ಲಕ್ಷ್ಮೀನಾರ್ಣಪ್ಪನ ಮಮ್ಮಗನ ಉಪನಯನ ಮಾಡಿದರು. ನನ್ನೂ ಊಟಕ್ಕೆ ಕರೆದರು. ವಿಳ್ಳೇದೆಲೆ ಮೆಲ್ಲೋಕೆ ಕುಳಿತಾಗ ಮಾತಿಗೆ ಮಾತು ಬಂದು ಶ್ರೀಪತಿ ವಿಚಾರ ಬಂದಿತು. ಆಗ ಲಕ್ಷ್ಮೀನಾರ್ಣಪ್ಪನವರು ಶ್ರೀಪತಿ ವಿಚಾರ ಒಂದು ಸಂಗತಿ ಹೇಳಿದರು. ಆಗ ಈ ಲೀಲಾದೇವಿ ವಿಚಾರವೇನೂ ಅವರು ಹೇಳಲೇ ಇಲ್ಲ ವಲ್ಲಾ !

"ಅವರವರು ಏನೋ ಸಂಬಂಧವಿರಬಹುದು. "ಮೌನಂ ಮಾನ ರಕ್ಷಣಂ" ಎಂದುಕೊಂಡು ಸುಮ್ಮನಾಗಿರಬಹುದು. ಆದಿರಲಿ, ಲಕ್ಷ್ಮೀ ನಾರಣಪ್ಪನವರು ಹೇಳಿದ್ದೇನು ಹೇಳು!''

"ಶ್ರೀಪತಿಯ ಮೊಲನೆಯ ಹೆಂಡತಿಗೆ ಕ್ಷಯಬಂದು, ಆಕೆ ಸಾಯುವ ಹಾಗಾದಳು. ಮೊದಲಿನಿಂದಲೂ ಆಕೆಯಲ್ಲಿ ವಿಶ್ವಾಸವೇ ಅವನಿಗಿರಲಿಲ್ಲ. ಅವಳಲ್ಲಿ ತನಗೆ ಮಕ್ಕಳಾಗಲಿಲ್ಲವಲ್ಲಾ ಎನ್ನುವುದೊಂದು ದೊಡ್ಡ ಕೊರತೆ. ಇನ್ನು ರೋಗಬಂದ ಮೇಲೆ ನಡೆದ ಔಷಧ ಉಪಚಾರಗಳ ರೀತಿನೀತಿಗಳೆ ನ್ನೇನೂ ಹೇಳಬೇಕಾಗಿಲ್ಲ. ಶ್ರೀಪತಿ ಮದುವೆ ತರದೂದು ಮಾಡಹತ್ತಿದ. ಅವನ ಕುಟ್ಲು ಮುಖ, ಮುಂಗೋಪ, ಹೊಲಸುಬಾಯಿ ನೋಡಿ ನೋಡಿ ಯಾರು ತಾನೆ ಹೆಣ್ಣು ಮಕ್ಕಳನ್ನು ಬಲಿಕೊಡಲು ಒಪ್ಪುತ್ತಾರೆ ಹೇಳು. ಎರಡು ಎರಡೂವರೆ ವರ್ಷ ಪೃಥ್ವಿಯನ್ನೆಲ್ಲಾ ಶೋಧಿಸಿದ. ಕೇಳಿದಷ್ಟು ಹಣ ಕೊಡುತ್ತೇನೆ ಎಂದ. ಆದರೂ ಪ್ರಯತ್ನ ಫಲಕಾರಿಯಾಗಲಿಲ್ಲ. ಈ ಮಧ್ಯೆ ಇವನ ಹತ್ತಿರ ಸಂತೇಬಾಚಹಳ್ಳಿ ನರಸಿಂಹಯ್ಯ, ಯಾವದೋ ಒಂದು ಜಮೀನಿನ ವ್ಯಾಜ್ಯದ ಕೇಸು ತಂದುಕೊಟ್ಟು ಹೆಣಗಾಡುತ್ತಿದ್ದ. ನರಸಿಂಹಯ್ಯನ ತಂಗಿ ಲಕ್ಷ್ಮೀದೇವಿಯ ವಿವಾಹ ಮಾಘ ಶುದ್ಧ ಚೌತಿಗೆ

ನಿಷ್ಕರ್ಷೆಯಾಗಿದ್ದದ್ದೂ, ಗಂಡು ಸೋದರಕಡೆಯವನು ಎಂಬುದೂ ಸರ್ವಾ
ತರ್ಯಾಮಿ ಶ್ರೀಪತಿಗೆ ಗೊತ್ತಾಯಿತು. ಗಂಡಿನ ಕಡೆಯವರೂ ಅನುಕೂ
ಸ್ಥರೇ. ಹುಡುಗ ಮೆಟ್ರಿಕ್ಯುಲೇಷನ ಕ್ಲಾಸಿನಲ್ಲಿ ಓದುತ್ತಿದ್ದ. ಮದುವೆ
ಆರಂಭವೂ ಆಯಿತು. ಮೊದಲನೆಯ ದಿವಸದ ದೇವರ ಸಮಾರಾಧ
ಎರಡನೆಯ ದಿವಸದ ನಾಂದಿಯ ಕೆಲಸಗಳು ಸಾಂಗವಾಗಿ ನೆರವೇರಿದ
ಮೂರನೆಯ ದಿವಸವೇ ಲಗ್ನ. ಸಭೆಯುಲ್ಲಾ ನೆರೆದಿದೆ, ವೈದಿಕರ ಉತ
ಹವೇ ಉತ್ಸಾಹ. ಗಂಡೂ ಹೆಣ್ಣೂ, ಗೂಡೆಯಲ್ಲಿ ಕಾಲಿಟ್ಟುಕೊಂ
ಅಕ್ಕೀಧಾರೆಗಾಗಿ ನಿಂತಿದ್ದಾರೆ! ಆ ವೇಳೆಗೆ ೫--೬ ಮಂದಿ ತುಂಡಾಂಡಿಗ
ಸಭಾಮಂದಿರಕ್ಕೆ ನುಗ್ಗಿ ಹೆಣ್ಣಿನ ಮುಖಕ್ಕೊಂದು ಬಟ್ಟೆ ಹಾಕಿ ಎ
ಕೊಂಡು ಹೊರಟರು. ಬಿಡಿಸಿಕೊಳ್ಳಲು ಬಂದವರನ್ನು ನಿರ್ದಾಕ್ಷಿಣ್ಯವಾ
ಚಾಟಿಯಿಂದ ಬಾಸುಂಡೆ ಬರುವ ಹಾಗೆ ಹೊಡೆದರು. ಮನೆಯಲ್ಲೆಲ
ಹಾಹಾಕಾರವೆದ್ದಿತು. ಹಸನ್ಮುಖಗಳೆಲ್ಲಾ ಕಂಬನಿ ಕಾಲುವೆಗಳಿಂದ ಕ
ಟ್ಟವು. ಕಲ್ಯಾಣಮಂಟವು ರೋದನರಂಗವಾಯಿತು. ಸಭಾಲಂಕಾರ
ಬಂದಿದ್ದವರು ನುಸುಳಿಕೊಂಡು ಒಬ್ಬೊಬ್ಬರಾಗಿ ನೊಂದವರಿಗೆ ಸಮಾಧಾ
ಕೂಡ ಹೇಳದೆ ಹೊರಟುಹೋದರು. ಮುಂದೇನು ಮಾಡಬೇಕೆಂಬು
ಒಬ್ಬರಿಗೂ ತೋಚಲೇ ಇಲ್ಲ. ಹೆಣ್ಣನ್ನೂ ಧಾರೆಯೆರೆದು ಕೊಡ
ನಿಂತಿದ್ದ ಅಣ್ಣನು ಅದೃಶ್ಯನಾಗಿದ್ದನು. ಅನುಲ್ದಾರರನ್ನು ಕರೆತರ
ಮದುವೆಯ ಗಂಡೇ ಹೊರಟು, ಪ್ರಾತಃಕಾಲ ಜಮಾಬಂದಿಗಾಗಿ ಅವ
ಹೊರಟುಹೋದ ವಿಚಾರ ತಿಳಿದುಬಂದನು. ಕ್ಷೇಮಸಮಾಚಾರ ಕೇ
ಬಂದರೆ ತಮಗೇನು ಪ್ರಾಣಕ್ಕೆ ಬರುವುದೋ ಎಂದು ಊರಿನವರು ಇ
ಲ್ಲಿಯೇ ಅಡಗಿಕೊಂಡರು.

ಹೀಗೆ ಮೂರು ದಿವಸಗಳು ಕಳೆಯಲು ದುಃಖಿತನಾದ ವರರಾಜ
ಬೆಂಗಳೂರಿಗೆ ಪ್ರಯಾಣಬೆಳೆಸಿದನು. ರತ್ನದಂತಹ ಸಂಬಂಧ ಆಗಂತು
ವಾಗಿ ತಪ್ಪಿಹೋಯಿತಲ್ಲಾ ಎಂದು ಎಲ್ಲರಿಗೂ ಪೇಚಾಟ. ಮನೆಯ ಮ
ಮಂಗವಾಯವಾಯಿತಲ್ಲಾ ಎಂದು ಎಲ್ಲರಿಗೂ ಅಳಲು. ಮಾಡಿದ ಅ
ಯೆಲ್ಲಾ ವ್ಯರ್ಥವಾಯಿತಲ್ಲಾ ಎಂದು ಎಲ್ಲರಿಗೂ ವ್ಯಸನ. ಇದಾದ ನಾ
ನೆಯ ದಿವಸವೇ ಮನೆಯ ಮುಂದೆಯೊಂದು ಮೋಟಾರುಗಾಡಿ ಬಂ

ನಿಂತಿತು. ಶ್ರೀಪತಿ, ನರಸಿಂಹಯ್ಯ ಇಬ್ಬರೂ ಮನೆಯನ್ನು ಪ್ರವೇಶಿಸಿದರು. ನರಸಿಂಹಯ್ಯನ ತಾಯಿ—ವೃದ್ಧ ಕುಂತಿದೇವಿ—ಮಗನನ್ನೂ ಕಂಡು, ಮಗ ಳನ್ನು ನೆನಸಿಕೊಂಡು ರಾಗರಾಗವಾಗಿ ಅಳಲಾರಂಭಿಸಿದಳು ನಡೆದ ಘಟನೆ ಯನ್ನು ಕೇಳಿ ನರಸಿಂಹಯ್ಯನು ಬಹು ಪರಿತಾಪಪಟ್ಟು ತಾಯಿಯನ್ನು ಗೋಪ್ಯವಾಗಿಯೊಂದು ಕೋಣೆಗೆ ಕರೆದೊಯ್ದು ಸಮಾಧಾನ ಹೇಳಿ ಹೊರ ತಂದನು. ಮುದುಕಿಯ ಮುಖದಲ್ಲಿ ಮೊದಲಿನ ದುಃಖವಿರಲಿಲ್ಲ. ಸಂತೋ ಷದ ಮೊದಲನೆಯ ಕಿರಣಬಿದ್ದಂತಿತ್ತು. ಶ್ರೀಪತಿಯು ಬಳಿಗೆ ಬಂದು "ಮಗು ಮುಖ್ಯ-ಎಲ್ಲಾದರೂ ಚೆನ್ನಾಗಿದ್ದರೆ ಸರಿ" ಎಂದಳು. ಶ್ರೀಪತಿಯು ಎರಡು ಪಾದಗಳನ್ನೂ ಮುಟ್ಟಿ ನಮಸ್ಕರಿಸಿದನು. ನರಸಿಂಹಯ್ಯ ಬಂದ ವಿಚಾರ ತಿಳಿದು ಬಂಧುವರ್ಗವೆಲ್ಲಾ ಬಂದು ನೆರೆದು ಅವನನ್ನು ಒಬ್ಬೊಬ್ಬರಾಗಿ ಬಾಯಿಗೆ ಬಂದಂತೆ ಬಯ್ಯಲು ಮೊದಲಿಟ್ಟರು. ಶ್ರೀಪತಿಯು ಮೋಟಾರಿ ನಿಂದ ಬುಟ್ಟಿಯೊಂದನ್ನು ತಂದು ಎಲ್ಲರ ಕೊರಳಿಗೂ ಘನವಾದ ಮೈಸೂರು ಹೂವಿನ ಮಾಲೆಗಳನ್ನು ಹಾಕಿ ಒಂದೊಂದು ರೂಪಾಯಿ ದಕ್ಷಿಣೆಯಿತ್ತು ತಾಂಬೂಲವಿತ್ತು ಕಣ್ಣಲ್ಲಿ ನೀರುತಂದುಕೊಂಡು, ಕೈಗಳೆರಡನ್ನೂ ಜೋಡಿಸಿ ಕೊಂಡು "ನಾನುಮಾಡಿದ ಮಹಾಪರಾಧವನ್ನು ಎಲ್ಲರೂ ಕ್ಷಮಿಸಬೇಕು. ನ್ಯಾಯಕ್ಕೂ ಧರ್ಮಕ್ಕೂ ವಿರುದ್ಧನಾಗಿ ಯಾವದೂ ನಡೆದಿಲ್ಲ. ತಂಗಿಯ ಹಿತಾಹಿತಕ್ಕೆ ಅಣ್ಣನಿಗಿಂತಲೂ ಹೆಚ್ಚಿನ ಬಾಧ್ಯಸ್ಥರು ಯಾರೂ ಇಲ್ಲ. ಶಾಸ್ತ್ರೋಕ್ತವಾಗಿ, ಅಗ್ನಿ ಸಮ್ಮುಖದಲ್ಲಿ ಗುರುಹಿರಿಯರ ಇದಿರಿನಲ್ಲಿ ನೀವಿ ಟ್ಟದ್ದ ಲಗ್ನದಲ್ಲೇ ನನಗೂ ಲಕ್ಷ್ಮಿದೇವಿಗೂ ವಿವಾಹ ನಡೆಯಿತು. ಈ ಊರಿನ ಅಮಲ್ದಾರರು, ಪೋ. ಸೂಪರಿಂಟೆಂಡೆಂಟರು, ಮೊದಲಾದ ದೊಡ್ಡ ಮನುಷ್ಯರೆಲ್ಲಾ ಬಂದು ವಧೂವರರನ್ನು ಆಶೀರ್ವದಿಸಿದರು. ಎಂದುಸುರಿ ದನು. ಎಲ್ಲರೂ ಆಶ್ಚರ್ಯಚಕಿತರಾದರು. ಎಲ್ಲವೂ ಮುಗಿದ ಮೇಲೆ ಮಾಡುವುದೇನು ? ಶ್ರೀಪತಿಯು ಬಹು ಧಾರಾಳದಿಂದ ಎಲ್ಲರಿಗೂ ಉಡು ಗೊರೆಗಳನ್ನಿತ್ತನು. ರೋದನರಂಗವಾಗಿದ್ದ ಗೃಹವು ಪುನಃ ಕಲ್ಯಾಣ ಮಂಟಪವೇ ಆಯಿತು. ಮೊದಲು ಕೆಲವು ದಿವಸ ಹೆಂಡತಿ ಎಲ್ಲಿ ಓಡಿಬಿಡು ತ್ತಾಳೋ ಎಂಬ ಭಯದಿಂದ ಹೊರಗೆ ತಾನು ಹೋಗುವಾಗ ಶ್ರೀಪತಿ ಅವಳ ನ್ನೊಂದು ಕೋಣೆಯಲ್ಲಿ ಕೂಡಿ ಬೀಗ ಹಾಕಿಕೊಂಡು ಹೋಗುತ್ತಿದ್ದನಂತೆ.

ಈಗ ಮಕ್ಕಳು ಮರಿಯಾಯಿತು-ಎಲ್ಲಾ ಸರಿಹೋಯಿತು.-ಹೇಗಿದೆ ಕಿಟ್ಟೋ-ಈ ಸುಭದ್ರಾ ಕಲ್ಯಾಣ?''

ಆಶ್ಚರ್ಯದಿಂದ ನಾನು ನಿರುತ್ತರನಾದೆ. ಶ್ರೀಪತಿಯ ಗುಂಡಿಗೆಗೆ ಬೆರಗಾದೆ. ''ಇದು ಬಹು ವಿಚಿತ್ರದ ಮದುವೆ ರಾಮು.''

''ಮದುವೆಯಲ್ಲಲ್ಲ ವೈಚಿತ್ರ್ಯ; ಶ್ರೀಪತಿ ವಿಧವೆಯರ ಕೊರಳಿಗೂ ಹಾರಹಾಕಿ ಅಡ್ಡಬಿದ್ದನಲ್ಲಾ! ಅದು ವಿಶೇಷ'' ಎಂದ ರಾಮು.

ಕತೆ ಮುಗಿಯಿತು. ಮನೆಯು ಸಿಕ್ಕಿತು. ಕೊನೆಗೂ ರಾಮೂನ ಗೆದ್ದೇ ಬಿಟ್ಟೆನಲ್ಲಾ ಎಂಬ ಹೆಮ್ಮೆಯಿಂದ ಹೋಗಿ ಮಲಗಿದೆ.

# ೯|| ಘಂಟೆ



ಹೌರಾ ರೈಲ್ವೆಯ ಸ್ಟೇಷನ್. ಗಲಭೆಯೋ ಹೇಳತೀರದು. ದುರ್ವಾಸನೆಯೋ ಸಹಿಸಲಸಾಧ್ಯ. ಅದು ಪೂಜಾರಜೆಯಕಾಲ. ಬಂಗಾಳದಲ್ಲಿ ನವರಾತ್ರಿಯೆಂದರೆ ಬಹಳ ದೊಡ್ಡ ಹಬ್ಬ. ಕ್ರೈಸ್ತರಿಗೆ ಕ್ರಿಸ್ತಮಸ್ ಹಬ್ಬವು ಹೇಗೋ ಹಾಗೆ. ನಾನು ಕಲ್ಕತ್ತೆಯ ಯೂನಿವರ್ಸಿಟಿಯಲ್ಲಿ ಎಂ. ಎಸ್. ಸಿ. ಗೆ ಓದುತ್ತಿದ್ದವನು ರಜೆಯನ್ನುಪಯೋಗಿಸಿಕೊಂಡು ಊರಿಗೆ ಹೋಗಿ ಬರುವ ಎಂದು ಹೊರಟಿದ್ದೆ. ದೂರದೇಶದಲ್ಲಿದ್ದು—ಅದರಲ್ಲಿಯೂ ಕಲ್ಕತ್ತೆಯಂತಹ ಅರಮನೆಗಳ ಊರಿನಲ್ಲಿದ್ದು --ಮನೆಗೆ ಹಿಂತಿರುಗಿ ಬರಿಗೈಯಲ್ಲಿ ಹೋಗಲಾದೀತೆ ? ಏನೋ, ಅಲ್ಪ ಸ್ವಲ್ಪ ರೇಶ್ಮೆಯ ಬಟ್ಟೆಗಳನ್ನೂ ಲೀಲೂಗೆ ಕೆಲವು ಬಂಗಾಳಿ ನಾಜೂಕಿನ ಫ್ರಾಕುಗಳನ್ನೂ........ಅವಳಿಗೆ ಬಂಗಾಳಿ ಹುಡುಗಿಯರು ಉಡುವಂತಹ ಅಂಚುಹೂವಿನ, ತೆಳುಬಣ್ಣದ ೨-೩ ಸೀರೆಗಳನ್ನೂ ಕೊಂಡಿದ್ದೆ. ಅಮ್ಮ ಹಿಂದಿನಕಾಲದವಳ್, ಅವಳಿಗೇನು ತೆಗೆದುಕೊಂಡು ಹೋಗಲಿ ಎಂದು ಯೋಚಿಸಿ ಯೋಚಿಸಿ ಬೆಳ್ಳಿ ಕೃಷ್ಣದೇವರ ವಿಗ್ರಹವೊಂದನ್ನು ಕೊಂಡಿದ್ದೆ. ಕೆಲಸವೇನು, ಮೈಸೂರನ್ನು ಮೀರಿಸುತ್ತಿರಲಿಲ್ಲ. ಆದರೂ ಕಲ್ಕತ್ತೆಯಿಂದ ತಂದವೋಲೆ ಪ್ರಾಶಸ್ತ್ಯ ಹೆಚ್ಚಷ್ಟೆ. ಈ ಪ್ರೆಜಂಟಗಳದೇ ಒಂದು ಸಣ್ಣ ಗಂಟಾಗಿದ್ದಿತ್ತು; ಜೊತೆಗೆ ನನ್ನ ಪುಸ್ತಕಗಳು, ಹಾಸಿಕೆ, ಮಡಿಯ ಪೆಟ್ಟಿಗೇ, ಬಟ್ಟೆಬರೆಗಳು! ಕಲ್ಕತ್ತೆಯ ಹಿಂದಿನ ಅನುಭವ ನೆನೆದು ರೈಲು ಹೊರಡುವದಕ್ಕೆ ಒಂದು ಘಂಟೆಯ ಮುಂಚೆಯೇ ಸ್ಟೇಷನ್ನಿಗೆ ಬಂದಿದ್ದೆ.

ಕಲ್ಕತ್ತೆಯೆಂದರೆ ಬಾಯಿ ಬಾಯಿ ಬಿಡೋ ಹುಡುಗರು ಈಗಲೂ ಇದ್ದಾರೆ. ನಾನೂ ಅವರಲ್ಲಿ ಒಬ್ಬನಾಗಿದ್ದೆ. ಆದರೆ ಕಲ್ಕತ್ತೆ ರೈಲ್ವೆ ಸ್ಟೇಷನ್ನಿನಲ್ಲಿ ಜುಲೈ ತಿಂಗಳಲ್ಲಿ ಬಂದಾಗ ಇಳಿದೆ. ಕನಸು ಅರ್ಥ ಹಾರಿದಂತಾಯಿತು. ಆ ವಾಸನೆ- ಆ ಕೊಳಕು-ನಾರಿಗೆ ಪೋಣಿಸಿದ್ದ ಮೀನುಗಳನ್ನು ಹಿಡಿದು

ಕೊಂಡು ಠೀವಿಯಿಂದ ಹೋಗುತ್ತಿದ್ದ ಆ ಶೊಬಚರ ಗುಂಪು-ಕೇಳಿದ ಪ್ರಶ್ನೆಗೆ ಪ್ರತ್ಯುತ್ತರ ಕೊಡದೆ ಮಕಮಕ ನೋಡುತ್ತಿದ್ದ ಆ ಮಂಕರ ಮಂಡಳಿ, ನೋಡುತ್ತ ರೈಲ್ವೇ ಸ್ಟೇಷನ್ನಿನ ಅಗಾಧತೆಯನ್ನನುಭವಿಸುತ್ತ ಬೆಂಗಳೂರಿಗೆ ಬಂದ ಬೋರೇಗೌಡನಂತೆ ಭ್ರಮೆಗೊಂಡು ಕಕ್ಕುಬಿಕ್ಕು ಹಿಡಿದಂತವ ನಾದೆ. ನನ್ನ ಅದೃಷ್ಟಕ್ಕೆ ಮೈಸೂರಿನವನೊಬ್ಬನು ಅವತ್ತು ದಾರಿತೋರಿಸಿ, ಸಹಾಯ ಮಾಡದಿದ್ದರೆ—ಪಾಡು ಬೇಡ.

ಕಲ್ಕತ್ತಾವಾಸ, ಬಂಗಾಳಿಗಳ ಸಹವಾಸ, ಮಾಡುತ್ತಾ ಮಾಡುತ್ತಾ ವಿವೇಕಾನಂದ, ರಾಮಮೋಹನ, ರವೀಂದ್ರರು ಇಲ್ಲಿ ಹೇಗೆ ಹುಟ್ಟಿದರಪ್ಪಾ ಎಂದೆನಿಸುತ್ತಿತ್ತು. ಬಂಗಾಳಿಗಳು ಒಂದು ಜನಾಂಗವಾಗಿ ಅಂತಹ ಬುದ್ಧಿ ವಂತರೇನಲ್ಲ. ಆದರೆ ಒಳ್ಳೆಯವರು. ಮೊದಲು ಯಾರನ್ನೂ ನಂಬುವುದಿಲ್ಲ, ನಂಬಿದರೋ ಪ್ರಾಣಕೊಡಲು ಸಿದ್ಧರಿರುತ್ತಾರೆ.

ನಾನು ಪೂಜಾರಜೆಯಲ್ಲಿ ಊರಿಗೆ ಬರುವಾಗ ಜೊತೆಯಲ್ಲಿ ಸೈಲೇಂದ್ರ ನೆಂಬ ಸಹಪಾಠಿಯೊಬ್ಬ ಬಂದಿದ್ದ. ನನಗೂ ಅವನಿಗೂ ಬೆಳೆದಿದ್ದ ಮೈತ್ರಿಯು ಒಡಹುಟ್ಟಿದವರನ್ನು ನಾಚಿಸುವಂತಿತ್ತು. ರೈಲ್ವೆ ಪ್ರಯಾಣದ ವಿಧಿಗಳೆಲ್ಲಾ ಪೂರೈಸಿದವು ; ಟಿಕೇಟು ಕೊಂಡು ನಾನು ಇಂಟರ ತರಗತಿಯಲ್ಲಿ ಕುಳಿತೆ, ಜೊತೆಯಲ್ಲಿ ಸೈಲೇಂದ್ರನೂ ಕುಳಿತ. ಆ ಡಬ್ಬಿಯಲ್ಲಿ ಏಳುಮಂದಿ ಪ್ರಯಾಣಿಕರು ಸುಲಭವಾಗಿ ಪವಡಿಸಬಹುದಾಗಿತ್ತು. ನಾನಲ್ಲದೆ ನಾಲ್ಕು ಮಂದಿ ಬಂಗಾಳಿಗಳು ಹಾಸಿಗೆ ಹಾಸಿಕೊಂಡು ಕುಳಿತಿದ್ದರು. ಒಂದು ಜಾಗೆಯು ಅವರ ಪೈಕಿ ಯಾರಿಗೋ "ರಿಸರ್ವ್" ಆಗಿತ್ತು. ಇನ್ನೊಂದು ಜಾಗೆಯು ಖಾಲಿ ಇದ್ದಿತು. ರೈಲು ಹೊರಡಲು ಕಾಲು ಘಂಟೆಯ ಮೇಲಿತ್ತು.

ನನ್ನ ಅಗಲಿಕೆಯು ಸೈಲೇಂದ್ರನಿಗೆ ಸಹಿಸಲಾರದಷ್ಟಾಗಿತ್ತು. ಮೈಸೂರಿನ ಸೊಬಗು, ಅರಮನೆಗಳ ರಮ್ಯತೆ, ದಸರಾಹಬ್ಬದ ವಿಜೃಂಭಣೆ, ಮಹಾರಾಜರ ನಿರ್ಮಲ ಕೀರ್ತಿ, ಗೆರುಸೊಪ್ಪೆ ಕನ್ನಂಬಾಡಿ ಬೇಲೂರಗಳ ವೈಭವಗಳನ್ನು ನನ್ನಿಂದ ಕೇಳಿ ಕೇಳಿ, ಅವನ ಆತ್ಮವೆಲ್ಲಾ ಮೈಸೂರಿನಲ್ಲಿಯೇ ಲೀನವಾಗಿದ್ದಿತು. ಮೈಸೂರಿನವರು ನೀವು ಎಷ್ಟು ಒಳ್ಳೆಯವರು, ಎಷ್ಟು ಗಿಂಸ್ಕೃತರು, ಎಷ್ಟು ಉದಾರಮತಿಗಳು ಎಂತಹ ಕುಶಲರು ಎಂಬ ಭಟ್ಟಿಂಸಯ ನುಡಿಗಳಿಗಂತೂ ನೆಲೆಯೇ ಇರಲಿಲ್ಲ. ಅವನ ಕಣ್ಣುಗಳಲ್ಲಿ ದುಃಖ

ಬಿಂದುಗಳು ಕೂಡಿದವು. ಮಾತೇ ಹೊರಡದಂತಿದ್ದಿತು. ನನ್ನನ್ನೇ ಕ್ಷಣ ಕಾಲ ನೋಡಿ ಕೈಹಿಡಿದು "ಪುನಃ ಬರುವಿಯಲ್ಲವೆ ? ನಮ್ಮನ್ನು ಮರೆಯುವು ದಿಲ್ಲವಷ್ಟೇ, ನಿನ್ನ ಮೈಸೂರು ನನ್ನ ಬಂಗಾಳ ಬೇರೆಯಲ್ಲ. ಎರಡೂ ಒಂದೇ ತಾಯಿಯ ಇಬ್ಬರು ಮಕ್ಕಳು" ಎಂದನು. ನನ್ನ ಕಣ್ಣುಗಳಲ್ಲಿಯೂ ನೀರು ತುಂಬಿತು. "ಶೀಲಬಾಬು, ಬಂಗಾಳವನ್ನು ಮರೆಯಲೇ, ನನ್ನ ಗುರು ರಾಮ ಕೃಷ್ಣ ದೇವನ ನಾಡಿದು. ನಿನ್ನಂತಹ ಸ್ನೇಹಿತನನ್ನು ದೊರಕಿಸಿ ಕೊಟ್ಟ ಪವಿತ್ರ ದೇಶವಿದು. ಗೋಪೀನಾಥಷಾ ಜತೀಂದ್ರರು ಹುಟ್ಟಿದ ಕರ್ಮಭೂಮಿಯಿದು. ಇದನ್ನು ಮರೆಯಲೇ—ರಜಾ ಮುಗಿದೊಡನೆಯೇ ಬರುವೆ. ಪ್ರತಿಮಾದೇವಿಗೆ (ಅವನ ಸಹೋದರಿ ನನ್ನ ಒಲವಿನ ಗೆಳತಿ) ನನ್ನ ನಮಸ್ಕಾರ ಹೇಳು." ಎಂದೆ. ಆಗ ಚಹಾ—ಚಹ ಹಿಂದೂ ಚಹಾ ಬಂದಿತು. ಸೈಲೇಂದ್ರನು ಚಹವನ್ನು ತೆಗೆದು ಬಲವಂತದಿಂದ ನನ್ನ ಕೈಗಿತ್ತನು. ಚಹದ ಪಾತ್ರೆಯನ್ನು ಹಿಡಿದು "ಕೃಷ್ಣ, ನಾಳೆಯಾರೋ ನಾವು ಯಾರೋ" ಎಂದುಸುರಿದನು. ಈ ಅಗಲುವಿಕೆಯ ಮಾತು ಮರೆಸಲು ನಾನು ರೂಮು ಬಟ್ಟೆ ಅಗಸನ ಮಾತು ತೆಗೆದೆ. ಸೈಲೇಂದ್ರನ ಮನಸ್ಸಾದರೋ ನನ್ನ ವಿಯೋಗವ್ಯಥೆಯಿಂದ ತಪ್ತವಾಗಿದ್ದಿತು. ಈ ವೇಳೆಗೆ ಮೊದಲನೆಯ ಘಂಟೆಯು ಬಡಿಯಿತು. ಸೈಲೇಂದ್ರನು ಎದ್ದು ನಿಂತು ಆದರದಿಂದ ನನ್ನನ್ನು ಅಪ್ಪಿದನು. ಈ ಉದ್ವೇಗದ ಭರದಲ್ಲಿ ನಾವಿರುವಾಗ ನಡೆಯುವ ಅಂಗಡಿಯೊಂದು ನಮ್ಮ ಡಬ್ಬಿಯ ಬಳಿಗೆ ಬಂದು ತನ್ನ ಸಾಮಾನುಗಳನ್ನೆಲ್ಲಾ ಒಳಗೆ ತಳ್ಳಲಾರಂಭಿಸಿತು. ಗಾಡಿಯಲ್ಲಿದ್ದ ಬಂಗಾಳಿಗಳು ಸಾಮಾನುಗಳನ್ನು ಹೊರಗೆ ಬಿಸುಡಲಾರಂಭಿಸಿದರು. ನಾನು ಮಧ್ಯೆ ಬಂದು ಹೊಸದಾಗಿ ಬಂದವನ ಆರ್ತನಾದಕ್ಕೆ ಮನಕೊಟ್ಟು ಉಳಿದಿದ್ದ ಜಾಗೆಯಲ್ಲಿ ಆತ ಕೂಡಬಹುದೆಂದು ಬಿನ್ನವಿಸಿದೆನು. ಸೈಲೇಂದ್ರನೂ ತನ್ನ ವಂಗಬಂಧುಗಳನ್ನೊಪ್ಪಿಸಿದನು. "ಒಳಗೆ ಹೊಸದಾಗಿ ಬಂದ ಪ್ರಯಾಣಿಕನು" "ಥ್ಯಾಂಕ್ಯು ವೆರಿ ಮಚ್" "ಮರಿನಿಂಡ ಉಪಕಾರವಾಯನುಂಡೀ." ಎಂದು ತನ್ನ ಸಾಮಾನುಗಳನ್ನಿಟ್ಟು ಕುಳಿತನು. ಆತನು ತೆಲಗು ಮಾತನಾಡಿದುದನ್ನು ಕೇಳಿ ನನ್ನ ಮನಸ್ಸು ಅರಳಿತು. ಈ ಸಾವಿರಾರು ಮೈಲಿಗಳ ಪ್ರಯಾಣದಲ್ಲಿ ಜೊತೆಗೊಬ್ಬ ಸಿಕ್ಕಿದನಲ್ಲಾ, ನನ್ನ ಭಾಷೆಯಂತಹ ಭಾಷೆಯನ್ನು ಮಾತ

ನಾಡುವವ ಎಂದು ಬಹು ಸಂತೋಷವಾಯಿತು. ಎರಡನೆಯ ಘಂಟೆಯು ಬಡಿಯಿತು. ಮನಸ್ಸಿಲ್ಲದೆಯೇ ಸೈಲೇಂದ್ರನು ಕೆಳಗಿಳಿದನು. ನನ್ನ ಕೈಯನ್ನು ಭದ್ರವಾಗಿ ಹಿಡಿದು "ಗುಡಬಯ್" ಎಂದನು. ಒತ್ತಿ ಒತ್ತಿ ಹಿಡಿದಿದ್ದ ಅಶ್ರು ಧಾರೆಗಳು ಧಾರಾಕಾರವಾಗಿ ಸುರಿಯಲಾರಂಭಿಸಿತು. ಮೂರನೆಯ ಘಂಟೆಯೂ ಬಡಿಯಿತು. ರೈಲು ಮುಂದೆ ನಡೆಯಿತು. ನನ್ನ ಕಂಗಳಲ್ಲಿಯೂ ಅಶ್ರುಪ್ರವಾಹ. "ಬರುವೆವು. ಇರುವೆವು. ಪ್ರೇಮಿಸುವೆವು; ದ್ವೇಷಿಸುವೆವು, ಒಂದಲ್ಲೊಂದು ದಿನ ಎಲ್ಲರೂ ಪಯಣ ಬೆಳೆಸುವೆವು. ಇಷ್ಟೆ ಅಲ್ಲವೆ ಜೀವನದ ಮರ್ಮ" ಎಂದೆನಿಸಿತು.

೨

ರೈಲು ಮುಂದೆ ಕೆಲವು ನಿಲ್ದಾಣಗಳವರೆಗೆ ಬರುವವರೆಗೂ ಮಾತೇ ಆಡಲು ಮನಸ್ಸು ಒರಲಿಲ್ಲ. ಆ ವೇಳೆಗೆ ಹೊಸ ಪ್ರಯಾಣಿಕನೂ ಹಾಸಿಗೆ ಹಾಸಿ, ತನ್ನ ಸಾಮಾನುಗಳೆಲ್ಲವನ್ನೂ ಜೋಡಿಸಿಟ್ಟು ವೃತ್ತಪತ್ರಿಕೆಯನ್ನು ಓದಲು ಹವಣಿಸುತ್ತಿದ್ದನು. ಖರಗಪುರಕ್ಕೆ ರೈಲುಬರಲು ಅಲ್ಲಿಯವನು ಕೆಲವು ಒಣಗಿಸಿದ ಕಾಬೂಲು ಫಲಗಳನ್ನು ಕೊಂಡು ನನಗೆ ಸ್ವಲ್ಪ ಒತ್ತಾಯದಿಂದಿತ್ತನು. ಅಲ್ಲಿಂದ ಮಾತುಕತೆಗಾರಂಭವಾಯಿತು. ನನ್ನ ಪೂರ್ವೋತ್ತರವನ್ನು ಕೇಳಿ ಮೈಸೂರಿನವನೆಂದು ತಿಳಿದಮೇಲಂತೂ ಆತನ ಆನಂದಕ್ಕೆ ಎಲ್ಲೆಯೇ ಇಲ್ಲದಂತಾಯಿತು. ಹಣ್ಣುಗಳ ಮುಖ್ಯಾಂಶವೆಲ್ಲಾ ನನ್ನ ಒಡಲು ಸೇರಲಾರಂಭಿಸಿತು. ಆತನು ಮೈಸೂರಿನಲ್ಲಿ ಒಂದೆರಡು ವರ್ಷ ಇದ್ದ ವಿಚಾರವೂ, ಕನ್ನಡ ಬರುವ ಸಂಗತಿಯೂ ತಿಳಿದಮೇಲೆ ನನ್ನ ಅಭಿಮಾನವೂ ಹೆಚ್ಚಿತು.

" ನೀವು ಮೈಸೂರಿನಲ್ಲಿ ಏನು ವ್ಯಾಪಾರ ಮಾಡುತ್ತಿದ್ದಿರಿ. ? "

"ನಾನು ಕೆಲವು ಮಿಲ್ಲುಗಳಿಗೆ ಏಜಂಟಾಗಿದ್ದೆ. ಆ ಸಂಬಂಧ ವ್ಯಾಪಾರ ಮಾಡುತ್ತಿದ್ದೆ. ಮೈಸೂರಿನವರ ಸಮಾನವಿಲ್ಲ ಕಾಣ್ರೀ ನಾನು ಕಾಶಿ, ಪ್ರಯಾಗ, ಅಲಹಾಬಾದ, ಗಯಾ, ಕಲ್ಕತ್ತಾ, ಡೆಲ್ಲಿ ಎಲ್ಲಾ ಸುತ್ತಿದ್ದೀನಿ. ಆದರೆ ಮೈಸೂರಿನವರ ವಿನಯ ನಡತೆ, ಅತಿಥಿ ವಾತ್ಸಲ್ಯ ಬಿಟ್ಟರೆ ಇನ್ನೆಲ್ಲೂ ಸಿಕ್ಕಿಲ್ಲ ಕಾಣ್ರೀ."

"ನಿಮ್ಮ ಪರಿಚಯ ಮಾಡಿಕೊಡಲೇ ಇಲ್ಲ. ತಾವು ಆಂಧ್ರದವರೇನು?"

"ಹೌದು, ನನ್ನ ಸ್ಥಳ ಬೆಜವಾಡಾ. ನನ್ನ ಹೆಸರು ಪ್ರಕಾಶರಾವ್ ಎಂದು. ಚಿಕ್ಕಂದಿನಲ್ಲಿಯೇ ನನಗೂ ನನ್ನ ತಂದೆಗೂ ಮಾತು ಬಂದು ನಾನು ಮನೆಬಿಟ್ಟುಬಿಟ್ಟೆ. ಹಾಗೆಯೇ ಭಿಕ್ಷಾನ್ನ ವಾರಾನ್ನದಿಂದ ಸ್ವಲ್ಪ ಓದಿಕೊಂಡು, ಅದೂ ಇದೂ ಕೆಲಸ ಮಾಡಿಕೊಂಡು ಕ್ರಮಕ್ರಮೇಣ ಸ್ವಲ್ಪ ದುಡ್ಡು ಜೊತೆಮಾಡಿಕೊಂಡೆ. ಆ ವೇಳೆಗೆ ನಮ್ಮ ತಂದೆಯೂ ತೀರಿ ಹೋಗಿದ್ದರು. ಅವರ ಅಲ್ಪ ಆಸ್ತೀನೇ ರೂಢಿಸಿಕೊಂಡು, ಮಿಲ್ಲುಗಳ ಏಜನ್ಸಿ ಸಂಪಾದಿಸಿಕೊಂಡು ಏನೋ ನಿಮ್ಮ ದಯದಿಂದ ಸ್ವಲ್ಪ ಹಣಕಾಸೂ ಮಾಡಿಕೊಂಡೆ. ಈಗ ಸ್ವಂತ ಮನೆಯಿದೆ. ನೀವು ಬೆಜವಾಡದಲ್ಲಿಳಿದೇ ಮದರಾಸಿಗೆ ಹೋಗಬೇಕು ಕಂಡಿರಾ. ಇಲ್ಲಿ ಆರಂಭವಾದ ಸ್ನೇಹ ಇಲ್ಲಿಗೇ ಮುಗಿಯಬಾರದು. ನನಗೆ ಎರಡು ಮಕ್ಕಳಿದ್ದಾರೆ. ಎರಡೂ ಎರಡು ರತ್ನಗಳು. ನನ್ನ ಕುಟುಂಬ, ಅವಳೇ ಈ ನನ್ನ ಭಾಗ್ಯಕ್ಕೆಲ್ಲಾ ಕಾರಣ. ಅವಳೇ ನನ್ನ ಮನೆಯ ಮಂಗಳ ಮೂರ್ತಿ. ನೀವು-ನೀವು ಅವಳನ್ನು ನೋಡಬೇಕು. ಮೈಸೂರೊಂದ್ರೆ ಅವಳಿಗೆ ಪ್ರಾಣ. ನಾವು ಮೈಸೂರು ಬಿಟ್ಟುಬಂದಾಗ ಅವಳಿಗೆ ಆಲಸ್ಯವಾಗಿ ೧೦೩-೧೦೪ ಡಿಗ್ರಿಗಳಷ್ಟು ಜ್ವರಾ ಬರುತ್ತಿತ್ತು. ಆಗೆಲ್ಲಾ ಮೈಸೂರದ್ದೇ ಕನವರಿಕೆ ಅವಳಿಗೆ. ನನ್ನ ಮಕ್ಕಳು ಅವರೇ ನನ್ನ ಮನೆಯ ಸೂರ್ಯಚಂದ್ರರು. ಇಲ್ಲಿ ನೋಡಿ...."—

ಎಂದು ಹೇಳಿ ತನ್ನ ದೊಡ್ಡಪೆಟ್ಟಿಗೆಯೊಂದನ್ನು ತೆರೆದನು. ಅದರ ತುಂಬಾ ಹೊಸ ಹೊಸ ವಸ್ತ್ರಗಳು. ಕಣ್ಮನಕ್ಕೆ ಒಪ್ಪುವ ಜರತಾರಿಯ ಬಟ್ಟೆಗಳು. ಮೇಲೆಯೇ ಇಟ್ಟದ್ದ ಚಿತ್ರಸಂಗ್ರಹ ಪುಸ್ತಕವೊಂದನ್ನು ತೆರದು, ನನ್ನ ಬಳಿಗೆ ಬಂದು ಕುಳಿತು ಉಲ್ಲಾಸ, ಉತ್ಸಾಹ, ಉದ್ವೇಗಗಳಿಂದ ಒಂದೊಂದು ಚಿತ್ರವನ್ನು ವರ್ಣಿಸಲಾರಂಭಿಸಿದನು. ಅವನ ಪತ್ನೀಪುತ್ರರ ಚಿತ್ರಗಳೇ ೧೦೦-೨೦೦ರಷ್ಟಿದ್ದಿರಬಹುದು.

"ನೋಡಿ, ನನಗೆ ಕೊಂಚ ಕೊಂಚ ಫೋಟೋತೆಗೆಯುವುದೂ ಬರುತ್ತದೆ. ಇವುಗಳಲ್ಲಿ ಮುಕ್ಕಾಲೆಲ್ಲವನ್ನು ನಾನೇ ತೆಗೆದುದು. ಇದು ನನ್ನ ಅನ್ನಪೂರ್ಣೆ (ಕುಟುಂಬದ ಹೆಸರು) ಯುದು; ಅವಳು ನಮ್ಮ ಮನೆಗೆ ಬಂದ

ವರ್ಷ ತೆಗೆದುಕೊಂಡ ಚಿತ್ರ. ಅವಳು ಶ್ರೀಮಂತರ ಮನೆಯಲ್ಲಿ ಹುಟ್ಟಿದ ವಳು. ನನ್ನಂತಹ ಬಡವನ ಕೈಹಿಡಿದಳು. ಆದರೂ ಒಂದು ದಿವಸವೂ ಅದು ಬೇಕು ಇದು ಬೇಕು ಎಂದು ಪೀಡಿಸಿದವಳಲ್ಲ. ಒಮ್ಮೆ ನನಗೂ ಮಕ್ಕ ಳಿಗೂ ಇನ್‌ಫ್ಲುಯಂಜಾ ಖಾಯಿಲೆ ಬಂದಿತು. ಸುತ್ತ ಮುತ್ತಲೂ ನಂಟರಿಂ ಬುವರ ಮನೆಗಳಿದ್ದವು. ಒಬ್ಬರೂ ನೆರವಾಗಲಿಲ್ಲ ಅವಳೊಬ್ಬಳೇ ಸೊಂಟ ಕಟ್ಟಿ ನಿಂತಳು. ಇತ್ತ ಆಸ್ಪತ್ರೆಗೆ ಹೋಗಿಬರುವುದು. ಇತ್ತ ನಮಗೆ ಗಂಜಿ ಕಾಸುವುದು. ಇತ್ತ ಮಕ್ಕಳ ನೆತ್ತಿಯ ಒತ್ತುವುದು. ಹಗಲೂ ರಾತ್ರಿ ನಿದ್ರಾ ಹಾರಗಳಿಲ್ಲದೆ ದುಡಿದಳು. ಸಹನದ ಆದಿಮೂರ್ತಿ. ನಾನು ಮುಂಗೋಪಿ. ದಂಡಿಸಿದರೆ ತನ್ನನ್ನು ತಿದ್ದಿಕೊಳ್ಳಲು ಪ್ರಯತ್ನಿಸುತ್ತಿದ್ದಳೇ ವಿನಾ ನನಗೆ ಎದುರುಬೀಳಳು—ಇದು ಅವಳು ಗರ್ಭಿಣಿಯಾಗಿದ್ದಾಗ ತೆಗೆದಚಿತ್ರ—ಇದು ಅವಳು ಭಾವಿಯುಬಳಿಯಲ್ಲಿ ನೀರು ಸೇದುತ್ತಿದ್ದಾಗ ತೆಗೆದುದು—ಇದು ನೋಡಿ, ಅವಳು ರಂಗವಲ್ಲಿ ಇಡುತ್ತಿರುವುದು. ರಂಗವಲ್ಲಿಯ ಕುಶಲತೆ ನೋಡ ಬೇಕಾದರೆ ಅನ್ನಪೂರ್ಣೆಯ ಕೆಲಸ ನೋಡಬೇಕು. ನೋಡಿ, ಇವು ನನ್ನ ಮಕ್ಕಳದು, ಅವರ ಬಳಿಯಲ್ಲಿ ಕುಳಿತಿರುವ ಚಿಕ್ಕಹುಡುಗಿ ನನ್ನ ಹೆಂಡತಿಯ ತಂಗಿ. ಅದೇ ? ಅದು ನಮ್ಮ ಮಾವ ಅತ್ತೆಯವರಚಿತ್ರ. ಅವರಿಗೆ ನಮ್ಮೊಂ ದಿಗೆ ಕುಳಿತು ಫೋಟೋತೆಗೆಸಿಕೊಳ್ಳುವುದಕ್ಕೆ ಬಹಳಸಂಕೋಚ. ಅದಕ್ಕೆ ತಲೆ ಬಗ್ಗಿಸಿಬಿಟ್ಟಿದ್ದಾರೆ."

"ಇದು ಯಾರ ಚಿತ್ರ."

"ನಮ್ಮ ತಾಯಿಯದು. ಆಕೆ ಈಗಿದ್ದಿದ್ದರೆ ನನ್ನ ಉಚ್ಚಸ್ಥಿತಿ ನೋಡಿ ಎಷ್ಟು ಆನಂದಪಡುತ್ತಿದ್ದಳೋ! ಮೊದಲಿನಿಂದಲೂ 'ಮನೆಗೆ ಸೊಸೆಬಂ ದದ್ದು ನೋಡಬೇಕು. ನನ್ನ ಮೊಮ್ಮಕ್ಕಳನ್ನು ಎತ್ತಿ ಆಡಿಸಿ ಕುಣಿಸಬೇಕು. ಅವರ ಸೊಂಟಕ್ಕೆ ಚಿನ್ನದ ಉಡಿಗೆಜ್ಜೆ ಮಾಡಿಸಿ ಹಾಕಬೇಕು' ಎಂದು ಪದೇ ಪದೇ ಹೇಳುತ್ತಿದ್ದಳು. ನಾವು ಅನಾಥರಾಗಿರುವೆವು. ನಮ್ಮ ಸುಖ ನೋಡಿ ಹಲುಬಿ ಕರುಬುವ ಬಂಧುಬಳಗಗಳಿದ್ದಾರೆಯೇ ವಿನಾ ಕಲೆತು ನಲಿ ಯುವವರು ಯಾರೂ ಇಲ್ಲ"

ಎಂದು ವರ್ಣಿಸುತ್ತಿರುವಂತೆಯೇ ಬಾಲಸೋರ್ ಸ್ಟೇಷನ್ ಬಂದಿತು. ಪ್ರಯಾಣಿಕನು ಕ್ಷಿಪ್ರದಲ್ಲಿ ಇಳಿದು ಟಿಕೀಟ್ ಆಫೀಸಿಗೆ ಹೋಗಿ ಸ್ವಲ್ಪ

ಹೊತ್ತಿನ ಮೇಲೆ ಕೈಯಲ್ಲೊಂದು ಕಾಗದ ಹಿಡಿದು ಪುನಃ ಬಂದನು. ರೈಲು ಮುಂದಕ್ಕೆ ಹೊರಡಲು ಇಲ್ಲಿನೋಡಿ ಎಂದಾ ಕಾಗದವನ್ನು ಕೈಗಿತ್ತನು. ಟೆಲಿಗ್ರಾಮಿನ ಪ್ರತಿ:—

"ಪ್ರಿಯೇ ಉಳಿದಿರುವುದು ೭೨೦ಮ್ಮೈಲುಗಳು. ನಾಳೆ ನಾನು ನೀನೂ ಮಕ್ಕಳು.
—ಪ್ರಕಾಶ"

ಇದೇ ರೀತಿಯಾದ ಸಂಭಾಷಣೆ ಸಾಗುತ್ತಿತ್ತು. ಸುಮಾರು ೧೨ ಘಂಟೆಯ ವೇಳೆಗೆ ರೈಲು ಕಟಕ್ ಸ್ಟೇಷನ್ನಿನ ಬಳಿಗೆ ಬಂದಿತು. ಪ್ರಕಾಶನು ತನ್ನ ತಿಂಡಿಯ ಬುತ್ತಿಯನ್ನು ತೆಗೆದನು. ನಾನೂ ತೆಗೆದೆನು. ಪರಸ್ಪರ ವಿನಿಮಯವಾದನಂತರ ಇಬ್ಬರೂ ಉಪಹಾರಮಾಡಿ ಮಲಗಿದೆವು ನನಗೆ ರೈಲ್ವೆಯಗಾಡಿಯಲ್ಲಿ ನಿದ್ದೆ ಸಾಮಾನ್ಯವಾಗಿ ಬರುವುದಿಲ್ಲ. ಮುಸುಕಿಹಾಕಿ ಮಲಗಿದೆ. ಅತ್ತಿತ್ತ ಹೊರಳಾಡಲಾರಂಭಿಸಿದೆ. ನಿದ್ರೆಯಂತೂ ಬಾರದು. ಜೊತೆಗೆ ತಿಗಣೆಯ ಕಾಟ. ಪ್ರಕಾಶದ ದೀಪ, ಶೀತಲವಾದ ಘಾಳಿಯ್ಕೆ ಹೊಡೆತ. ಈ ಮಧ್ಯೆ ರೈಲು ನಿಂತಾಗ ಪ್ರಯಾಣಿಕರ ನುಗ್ಗಾಟದ ಗೊಂದಲ. ಮಧ್ಯೆ ಸ್ವಲ್ಪ ಜೋಂಪು ಹತ್ತಿತೆಂದರೆ " ಟಿಕಿಟ್ ಟಿಕೆಟ" ಎಂಬ ಟಿಕಟಿಕ ಶಬ್ದ. ಒಂದುಸಲ ಮಲಗಿ ಮಲಗಿ ಬೇಸತ್ತು ಎದ್ದೆ. ಪ್ರಕಾಶರಾಯನು ತೊಟ್ಟಿಲಿನಲ್ಲಿ ಜೋಗುಳದ ಇನಿದನಿ ಕೇಳಿ ಮಲಗಿದ ಮಗುವಂತೆ ಮಲಗಿ ನಿದ್ರಿಸುತ್ತಿದ್ದನು. ಮುಖದ ಮೇಲೆ ನಸುನಗೆಯ ತಾಂಡವನೃತ್ಯ. ಮಧ್ಯೆ ಮಧ್ಯೆ " ಅನ್ನಪೂರ್ಣಾ ನನ್ನ ರನ್ನಾ ಕೊನೆಗೆ ಬಂದೆಬಿಟ್ಟೆ. ಇನ್ನು ಜೀವವಿರುವವರೆಗೆ ನಿನ್ನನ್ನಗಲೆನು. ನನಗೆ ನಿನ್ನ ಬಿಟ್ಟು ಇನ್ನಾರಿದ್ದಾರೆ" ಎಂಬ ಕನವರಿಕೆ. ಅವನ ಸಂತಸವನ್ನು ನೋಡುತ್ತ ನೋಡುತ್ತ "ಏನು ಸುಖ" ಎಂದೆನಿಸುತ್ತಿತ್ತು. ಮಧ್ಯೆ ಮಧ್ಯೆ ಯಾವ ಯಾವದೋ ಭಾವನೆಗಳು ನನಗೆ ಹರಿಯುತ್ತಿದ್ದವು. ಛೆ! ಛೆ! ಎಂದಂದು ಅವುಗಳನ್ನು ಮರೆಯಲೆತ್ನಿಸುತ್ತಿದ್ದೆ. ಭಾವನೆಗಳನ್ನು ಮರೆಯುಲು ಸಾಧ್ಯವೇ? ಒಮ್ಮೊಮ್ಮೆ ಕಿಟಕಿಯಿಂದಿಣಿಕಿ ನೋಡಿದರೆ ದೀಪದ ಹುಳಗಳ ದೀಪೋತ್ಸವ ಗಿಡಬಳ್ಳಿಗಳಿಗೆಲ್ಲಾ ಅಲಂಕರಿಸಿದಂತೆ ಕಾಣುತ್ತಿದ್ದಿತು. ಪ್ರಶಾಂತತೆಯಿಂದ ಪ್ರಕಾಶಿಸುತ್ತಿದ್ದ ಹುಣ್ಣಿಮೆಯ ಚಂದ್ರನ ಶಾಂತಪ್ರಭಾವ ಈ ಮಧ್ಯೆ, ರೈಲ್ವೆಮಾರ್ಗಕ್ಕೆ ಕೊರೆದಿದ್ದ ಕಣಿವೆಯಲ್ಲಿ ರೈಲು ನಡೆದಾಗ ಆಗುತ್ತಿದ್ದ 'ಗೊ' ಎಂಬ

ಭಯಂಕರಶಬ್ದ. ಪ್ರಶಾಂತತೆಯಲ್ಲಿ ಗಭೀರತೆ. ಕ್ರಿಮಿಕೀಟಗೂಗೆಗಳ ಕರ್ಕಶನಾದದಲ್ಲಿ ತಿಳಿನೀರ ಹೊಳೆಯಮೇಲೆ ಕುಣಿಯುತ್ತ ತನ್ನ ಮೋಹದ ಬಲೆ ಬೀಸುತ್ತಿದ್ದ ಮಾರುತನ ಮಧುರಗಾನ. ಹೊರಗಿಣಿಕಿ ನೋಡಿದರೆ ಚಂದ್ರಮನ ಪವಿತ್ರನಗೆ, ಒಳಗೆ ನೋಡಿದರೆ ಪ್ರವಾಸಿ ಪ್ರಕಾಶರಾಯನ ನಿರ್ಮಲ ನಗೆ. ಇವುಗಳ ಮಧ್ಯೆ ನನ್ನ ಮನಸ್ಸಿನ ಆಂದೋಲನ. ಈ ಮಿಶ್ರಭಾವನೆಗಳನ್ನು ಅನುಭವಿಸುತ್ತ ನಾನು ರಾತ್ರಿಯನ್ನು ಕಳೆಯಲಾರಂಭಿಸಿದೆ. ಪುನಃ ನಿದ್ರೆಯ ಜೋಂಪು ಹತ್ತಿತು. ಮಲಗಿದೆ. ಎಚ್ಚರವಾದಾಗ ಸೂರ್ಯೋದಯವಾಗಿದ್ದಿತು. ಪಲಸಾ ಸ್ಟೇಷನ್ನಿನ ಬಳಿಗೆ ರೈಲು ಬಂದು ನಿಂತಿತು.

೩

ಆ ವೇಳೆಗೇ ಪ್ರಕಾಶರಾಯನು ಎದ್ದು ಕುಳಿತಿದ್ದನು. ರೈಲು ನಿಲ್ಲುವುದನ್ನೇ ಕಾಯುತ್ತಿದ್ದನೆಂದು ಕಾಣುತ್ತದೆ. ಕೂಡಲೆ ಇಳಿದು ಮತ್ತೊಂದು ಟೆಲಿಗ್ರಾಂ ಕೊಟ್ಟು ಬಂದನು. ಆತನ ಅವಸರವನ್ನು ಕಂಡು ನನಗೆ ನಗೆಯೊಂದು ಕಡೆ; ಮಗುವಿನಂತಹ ಸರಳತೆಯನ್ನು ಕಂಡು ಅಂತಃಕರಣವೊಂದು ಕಡೆ. ಟೀ ಉಪಹಾರಗಳಾದವು.

"ಉಳಿದಿರುವುದೆಲ್ಲಾ ೩೦೦ ಮೈಲಿಗಳು. ಊರಿಗೆ ಹತ್ತಿರವಾಗುತ್ತ ಮನಸ್ಸಿನ ತವಕವು ಹೆಚ್ಚುತ್ತಿದೆ ನೋಡಿ."

"ನೀವು ಊರು ಬಿಟ್ಟು ಬಹಳ ವರ್ಷಗಳಾದವೋ ?"

"ಯುಗಯುಗಾಂತರಗಳೆಂದೇ ಹೇಳಬೇಕು. ಒಂದು ವರ್ಷದ ಮೇಲಾಗಿದೆ. ಆದಿರಲಿ. ನನ್ನ ಪ್ರಶ್ನೆಗೆ ಕ್ಷಮಿಸಬೇಕು. ತಮಗೆ ಮದುವೆಯಾಗಿದೆಯೋ ?"

"ಆಗಿದೆ"

"ಮನೆಗೆ"

"ಇಲ್ಲ. ಇನ್ನೂ ಇಲ್ಲ...."

"ಹಾಗಾದರೆ ಆದರೂ ಆಗದಂತೆಯೆ ಸರಿ. ನಿಮಗೂ ಮನೆಯಲ್ಲಿ ಹೆಂಡತಿ ಮಕ್ಕಳು ಕಾಯುತ್ತಿದ್ದರೆ ಆಗ ಗೊತ್ತಾಗುತ್ತಿತ್ತು. ಈ ರೈಲು ಬಹು ನಿಧಾನ ನೋಡಿ"

"ರೈಲು ನಿಧಾನವಲ್ಲ. ನಿಮ್ಮ ಮನಸ್ಸಿನ ವೇಗ ಬಹುಹೆಚ್ಚು.' ಎಂದು ಅದೂ ಇದು ಮಾತನಾಡುತ್ತ ಕುಳಿತೆವು.

ಅಂತೂ, ಯಾವ ವಿಷಯ ಬಂದರೂ, ಕೊನೆಯಲ್ಲಿ ಅನ್ನಪೂರ್ಣಾ ಮಕ್ಕಳ ಸ್ತುತಿಯಲ್ಲಿ ಮುಗಿಯುತ್ತಿತ್ತು. ಕೊನೆಕೊನೆಗೆ ನನಗೆ ಬೇಸರವಾಗುವಷ್ಟೂ ಆಯಿತು. ಆದರೂ ಅವನು ಹೇಳಿದಂತೆ "ಮನೆಗೆ ಬಂದು ಮಕ್ಕಳೂ........ಕಾಯುತ್ತಿದ್ದರೆ" ಎಂದೆನೆಸುತ್ತಿತ್ತು. ನಿಶ್ಶಬ್ದತೆಯಿಂದ ಅವನ ವರ್ಣನೆಯೆಲ್ಲವನ್ನೂ ಕೇಳುತ್ತಲಿದ್ದೆ.

ಸುಮಾರು ೧೨ ಘಂಟೆಯ ವೇಳೆಗೆ ವಾಲ್ಟೇರ್ ಬಳಿಗೆ ಬಂದೆವು. ನನಗೆ ಹಸಿವೇ ಇರಲಿಲ್ಲ. ಜೊತೆಗಾರನ ಬಲವಂತದಿಂದ ಊಟ ಮಾಡಿ ಬಂದೆ. ಪ್ರಕಾಶರಾಯನಿಗೆ ಊಟ ರುಚಿಸಲಿಲ್ಲ. ನನ್ನೆದುರಿಗೇನೋ "ಖಾರ ಸಾಲದ್ರೀ, ಊಟ ಚೆನ್ನಿಲ್ಲ" ಎಂದಂದ. ಆದರೆ ನೈಜವಾಗಿಯೂ ಮಾಡುವವರು ಮಾಡಿ, ಬಡಿಸುವವರು ಬಡಿಸಿರಲಿಲ್ಲ. ಅದೇ ಅತೃಪ್ತಿಗೆ ಕಾರಣವೆಂದು ನನಗೆ ಭಾಸವಾಯಿತು.

ರಾಜಮಹೇಂದ್ರಿಯ ಬಳಿಗೆ ಐದು ಘಂಟೆಗೆ ರೈಲು ಬಂದಿತು. ಸ್ಟೇಷನ್ನಿನಲ್ಲಿ ಕಾಫಿಯನ್ನು ಕಂಡು ನನ್ನ ಮಂಕು ಅರ್ಧ ಹರಿಯಿತು. ಪ್ರಕಾಶರಾಯನ ದೇಹಾದ್ಯಂತವೂ ಚೇತನಸ್ವರೂಪಿಯಾಯಿತು. ಮತ್ತೊಂದು ಟೆಲಿಗ್ರಾಮನ್ನಿತ್ತು ತನ್ನ ಗುರುತಿನೊಬ್ಬನೊಂದಿಗೆ ಮಾತನಾಡುತ್ತ ಬಂದ. ನಡೆದ ಸಂಭಾಷಣೆಯು ನನಗೆ ಸಂಪೂರ್ಣ ಅರ್ಥವಾಗದಿದ್ದರೂ ಹೆಂಡತಿ ಮಕ್ಕಳ ಯೋಗಕ್ಷೇಮದ ಕಥೆಯೇ ಆಗಿತ್ತೆಂದು ಗೊತ್ತಾಯಿತು. ರೈಲು ಎಲ್ಲೂರ ಎಲ್ಲೆಯನ್ನೂ ದಾಟಿತು. ಪ್ರಕಾಶರಾಯನ ಉದ್ವೇಗಕ್ಕೆ ಮಿತಿಯೇ ಇಲ್ಲವಾಯಿತು. ಸಾಮಾನುಗಳೆಲ್ಲವನ್ನೂ ತೆಗೆದುಕೊಂಡು ಬಾಗಿಲ ಸಮೀಪವಾಗಿಟ್ಟುಕೊಂಡನು. ಹುಡುಗರಿಗೆ ತಂದಿದ್ದ ಗಾಡಿಯನ್ನು ಅಲ್ಲಿಂದ ಇಲ್ಲಿಗೆ ಒಂದೆರಡು ಬಾರಿ ಎಳೆದಾಡಿ ತೃಪ್ತಿಪಟ್ಟುಕೊಂಡನು; ಕಣ್ಣು ತಿರಗಿಸುವ ಬೊಂಬೆಯನ್ನೂ, ಬೊಗಳುವ ನಾಯಿಯನ್ನೂ, ಹಲ್ಲು ಕಿರಿಯುವ ಕೋತಿಯನ್ನೂ, ಪರೀಕ್ಷಿಸಿ ಜೋಪಾನವಾಗಿ ಕಾಗದದಲ್ಲಿ ಸುತ್ತಿ ಪೆಟ್ಟಿಗೆಗೆ ಹಾಕಿಕೊಂಡನು. ಈ ಮಧ್ಯೆ ಚಿತ್ರಸಂಗ್ರಹಪುಸ್ತಕ (Album) ವನ್ನೊಮ್ಮೆ ತೆರೆದು ಅಪ್ಪಿ ಚುಂಬಿಸಿದನು. ಈ ಸಡಗರವು ವಿವಾಹಮಂಟ

ಪವನ್ನು ಅಲ್ಲಿಗಳಿಯುವಷ್ಟರ ಮಟ್ಟಿಗಿದ್ದಿತು. ಎಲ್ಲವು ಅಣಿಯಾದನಂತರ ವಸ್ತ್ರಧಾರಿಯಾಗಿ,

"ರಾಯರೇ, ತಮ್ಮ ಪರಿಚಯವಾದದ್ದು ಬಹು ಸಂತೋಷ. ಜ್ಞಾಪಕ ವಿರಲಿ. ಯಾವಾಗಲಾದರೂ ಹೀಗೆ ಬಂದಾಗ ಬೆಜವಾಡದಲ್ಲಿ ಇಳಿಯದೆ ಹೋಗಬೇಡಿ. ಊರು ತಲುಪಿದಮೇಲೆ ಕಾಗದ ಬರೆಯುತ್ತಿರಿ" ಎಂದು ತನ್ನ ಭೆಟ್ಟಿಯ ಚೀಟಿಯ ಮೇಲೆ ವಿಳಾಸವನ್ನು ಗುರುತು ಹಾಕಿಕೊಟ್ಟು, ಬಾಗಿಲಬಳಿಗೆ ಹೋಗಿ ನಿಂತು, ತನ್ನೊಂದಿಗಿದ್ದ ರೈಲಿನ ಬೀಗದ ಕೈಯಿಂದ ಬಾಗಿಲನ್ನು ತೆರೆದು, ಹಾಗೆಯೇ ನಿಂತನು. ನಾನು 'ರಾಯರೇ ಹೇಗೂ ಸ್ಟೇಷನ್ ಬಂದಿತು. ಬನ್ನಿ, ಕುಳಿತುಕೊಳ್ಳಿ' ಎಂದದ್ದು ಆತನ ಕಿವಿಗೆ ಬೀಳ ಸಲೇ ಇಲ್ಲ. ತನ್ನಾಗಮನವನ್ನು ಸೂಚಿಸುವ ಸೀಟಿಯ ಧ್ವನಿಯನ್ನು ರೈಲು ಮಾಡಿತು. ಪ್ರಕಾಶರಾಯನು ನನ್ನ ಕಡೆ ತಿರುಗಿ 'ಉಳಿದಿರುವುದೆಲ್ಲಾ ಇನ್ನೊಂದೆರಡು ಮೈಲಿಗಳು ಕಾಣಿರಿ' ಎಂದಂದನು.

೯-೩೦ ಗಂಟೆಯ ಸಮಯ. ರೈಲು ನಿಲ್ದಾಣದ ಸಮೀಪವಾಗುತ್ತ ಬಂದಿತು. ಅಲ್ಲಿನ ದೀಪಗಳು, ಜನಗೊಂದಲವು ಕಾಣಿಸುತ್ತಿತ್ತು. ಆಗ ಪ್ರಕಾಶರಾಯನು "ರಾಯರೇ, ಅಗೋ ಅವಳೇ. ಮಕ್ಕಳೂ ಸಹ" ಎಂದು ಕಿರಿಚಿದನು. ನಾನು ಕಿಟಕಿಯಿಂದಾಚೆ ತಲೆಯಿಟ್ಟು ಯಾರೆಂದು ನೋಡಿದೆ. ಮಹದಾರ್ಭಟ ಮಾಡಿಕೊಂಡು ಎದುರುಕಡೆಯಿಂದ ಮತ್ತೊಂದು ರೈಲು ಬರುತ್ತಿದ್ದಿತು. ಈ ಕಿಟಕಿ ಆ ಕಿಟಕಿಗಳ ಸಂದಿನಲ್ಲಿ ಪ್ರಕಾಶರಾಯನ ಪತ್ನೀ-ಪುತ್ರರು ಕಾಣುತ್ತಿದ್ದರು. ನಾನು ಹಾಗೆ ನೋಡುತ್ತಿರುವಂತೆಯೇ ಯಾವದೋ ಪದಾರ್ಥ ಬಿದ್ದಹಾಗಾಯಿತು. ಎದುರಿಗೆ ಬರುತ್ತಿದ್ದ ರೈಲು ಇದ್ದಕ್ಕಿದ್ದ ಹಾಗೆಯೇ ನಿಂತಿತು. ನಮ್ಮ ರೈಲೂ ನಿಂತಿತು. ನನ್ನ ಹೃದಯವು ಝಲ್ಲೆನಲು ಇಳಿದು ಜನತೆಯ ಗುಂಪು ಓಡುತ್ತಿದ್ದ ಕಡೆಗೆ ಓಡಿದೆ. ಅಧಿಕಾರಿಗಳು ಒಂದು ಪದಾರ್ಥವನ್ನು ಚಕ್ರಗಳ ಕೆಳಗಿನಿಂದ ಎಳಿಯುತ್ತಿದ್ದರು. ಪದಾರ್ಥವನ್ನು ನೋಡಿದೆ. ಮೊದಲು ಗುರುತು ಸಿಕ್ಕಲಿಲ್ಲ. ವೇಷಭೂಷಣಗಳನ್ನು ದಿಟ್ಟಿಸಿ ನೋಡಿದೆ. ಪ್ರಕಾಶರಾಯ-ಜೊತೆಯಲ್ಲಿ ಬಂದ ಪ್ರಕಾಶರಾಯ. ಅವನ ಪತ್ನಿಯೂ ಶವದ ಬಳಿ ಬಂದು ನಿಂತಿದ್ದಳು. ಅವನ ಸಾಮಾನುಗಳೆಲ್ಲವನ್ನೂ ಹೊರಗಿಟ್ಟು "ಅಮ್ಮಾ, ಏನು ಹೇಳಲಿ ಅವರ

ಸಡಗರ………" ಎಂದೆ. ಮುಂದೆ ಮಾತು ಹೊರಡದಾಯಿತು. ಕಂಠವು ಬಿಗಿದು ಬಂದಿತು. ರೈಲ್ವೆಯ ಘಂಟೆಯೂ ಕೇಳಬಂತು-ಗಾರ್ಡ್‌ನ ಹಸುರು ದೀಪ-ಪೋರ್ಟರನ ಕೂಗು-ಗಾಡಿಯಲ್ಲಿ ಕುಳಿತೆ. ಮಂದಕ್ಕೆ ಹೊರಟಿತು.

* * * * *

ಹೃದಯದಲ್ಲಿ ಅಣಗಿಸಲಾರದಷ್ಟು ಅಲ್ಲೋಲಕಲ್ಲೋಲತೆ. ಕಂಗಳಲ್ಲಿ ಅಶ್ರುಪ್ರವಾಹ. ಈ ಮಧ್ಯೆ ಯಥಾಶಾಂತತೆಯಿಂದ ಹೊರಡುತ್ತಿದ್ದ ರೈಲನ್ನು ಕಂಡು "ಜೀವನವೆಲ್ಲವೂ ಒಂದು ಪಯಣ" ಎಂದೆನಿಸಿತು.

# ಪುನರುಜ್ಜೀವನ



"ಯೋಷೀ, ರಜನಿಯು ಹೇಗೆ ಪ್ರಕಾಶಿಸುತ್ತಿರುವುದು ನೋಡು. ಪೂರ್ಣ ಚಂದಿರನ ಸೊಬಗನ್ನು ನೋಡು. ಸಮ್ರಾಟನ ಆಸ್ಥಾನವನ್ನು, ಅಂಬರದಲ್ಲಿ ಸೂರ್ಯಮಂಡಲದ ಸುತ್ತಲೂ ಇರುವ ನಕ್ಷತ್ರಗಳ ಗುಂಪಿಗೆ ಹೋಲಿಸಬಹುದಲ್ಲವೇ ?"

"ನೀವು ಸುಮ್ಮನಿದ್ದರಾಗುತ್ತದೆ. ನಿಮ್ಮ ರಜನಿಯ ಸೊಬಗನ್ನಾಗಲೀ, ನಿಮ್ಮ ಸಮ್ರಾಟನ ಆಸ್ಥಾನವನ್ನಾಗಲೀ ಮೆಚ್ಚುವ ಶಕ್ತಿ ನನಗಿಲ್ಲ. ತಾವಾದರೋ ಸುಪ್ರಸಿದ್ಧ ಕವಿಗಳು. ಸಮ್ರಾಟನ ಪ್ರೇಮಾಸ್ಪದರು ಸಮ್ರಾಟನಿಂದ ಅನೇಕ ಬಹುಮಾನಗಳನ್ನೂ, ಗೌರವವನ್ನೂ, ಪಡೆದವರು. ಆದರೆ ನಾನು ಮುಗ್ಧೆ. ಹಳ್ಳಿಯ ಹುಡುಗಿ. ನಿಮ್ಮ ಕವಿತೆಗಳೇಕೋ ನನಗೆ ರುಚಿಸುವುದೇ ಇಲ್ಲ."

"ಯೋಷೀ, ಕವಿತೆಗಳು ಸಾಮಾನ್ಯವಾಗಿ ಎಲ್ಲರಿಗೂ ಅರ್ಥವಾಗುವ ಪದಗಳಲ್ಲ. ಗೂಢಾರ್ಥಗಳನ್ನು ಸೂಕ್ಷ್ಮರೀತಿಯಿಂದಲೂ, ನಯವಿನಯಗಳಿಂದಲೂ, ಪ್ರಕಟಿಸುವ ರತ್ನದ ಚೂರುಗಳು. ಯೋಷೀ, ಪ್ರಪಂಚವೇ ನನ್ನ ಕಿನ್ನರಿಯ ಧ್ವನಿಗೆ ಮೈಮರೆತಿದ್ದರೆ ನೀನು, ನನ್ನ ಸ್ವಂತ ಸಹಧರ್ಮಿಣಿ ಹೀಗೆ ಅಲ್ಲಗಳೆಯುವಿಯಲ್ಲಾ ; ಇದಕ್ಕೆ ಕಾರಣವೇನು ಯೋಷಿ ?"

"ರಾಷ್ಟ್ರದವರೆಲ್ಲರೂ ಧರ್ಮವನ್ನು ಮರೆತಿರುವರು ; ಇಹಪರ ಸುಖಕ್ಕೆ ಸಾಧನವಾದ ಮಾತೃಬಂಧವಿಮೋಚನ ಕಾರ್ಯವನ್ನು ತಮ್ಮಂತೆ ಸಂಪೂರ್ಣವಾಗಿ ಅವರು ತ್ಯಾಜ್ಯ ಮಾಡಿರುವರು ; ಅಂತೇ ನಿಮ್ಮ ಕಿನ್ನರಿಯ ಕೀರ್ತನೆಗೆ ಹೆಜ್ಜೆ ಹಾಕುತ್ತಾರೆ. ಆದರೆ ಹಿಂದೂರಾಷ್ಟ್ರದ ಧರ್ಮ, ಪಾವನತ್ವದ ಜ್ಯೋತಿಗಳು ನನ್ನ ಹೃದಯದಲ್ಲಿ ಇಂದಿಗೂ ಪರಿಶುದ್ಧತೆಯಿಂದ

ಪ್ರಕಾಶಿಸುತ್ತಿರುವವು. ಆದ್ದರಿಂದಲೇ ದಾಸ್ಯತನದ ಕೀರ್ತನೆಗಳು ನನಗೆ ರುಚಿಸವು."

"ಯೋಷೀ, ಮನೆತನದ ಮಾತನ್ನು ಮರೆತು ರಾಜಕೀಯವನ್ನಾರಂಭಿಸಿದೆ. ಜೋಕೆ! ನೀನು ಮಾತನಾಡುತ್ತಿರುವುದು ರಾಜದ್ರೋಹ; ನೆನಪಿನಲ್ಲಿರಲಿ. ಸಮ್ರಾಟನು ಸಾಮಾನ್ಯನೆಂದರಿಯಬೇಡ. ಯೋಷಿ, ನನ್ನ ಗೌರವಕ್ಕೂ ನನ್ನ ಪದವಿಗೂ ಚ್ಯುತಿಯನ್ನು ತರಲು ಪ್ರಯತ್ನಿಸಬೇಡ, ಜೋಕೆಯಿಂದಿರು."

"ಇರಲಿರಲಿ; ನಾನು ಕಂಡಿರುವೆನು. ನಿಮ್ಮ ಸಮ್ರಾಟನೇನು ನನಗೆ ಹೊಸಬನಲ್ಲ. ಸಮ್ರಾಟನ ನಡೆವಳಿಕೆಗಳನ್ನು ಅರಿಯದಷ್ಟು ಅಜ್ಞಳೇನಲ್ಲ. ಪರಸ್ತ್ರೀಯರನ್ನೇ ಸದಾ ಬಯಸುತ್ತಾ, ಸ್ವಸುಖದಲ್ಲಿಯೇ ಮಗ್ನನಾಗಿ, ಅಜ್ಞರಾದ ನಿಮ್ಮಂತಹ ಹಿಂದುಗಳಿಗೆ ಅಲ್ಪಸ್ವಲ್ಪ ಆಶೆ ತೋರಿಸಿ ಜಾತಿ-ಮಾನಗಳನ್ನು ಕೆಡಿಸುತ್ತಿರುವ ನರಾಧಮನವನು. ನಿಮ್ಮ ಕಣ್ಣಿಗೆ ಮನ್ಮಥನಂತೆ ಕಂಡುಬಂದರೂ ನನಗವನು ಮಹಿಷಾಸುರನೇ!"

"ಯೋಷೀ, ಹಾಳಾದವಳೇ! ಕೆಟ್ಟ ಹೆಂಗಸೇ! ನಿನಗೇನು ದುರ್ಬುದ್ಧಿ ಬಂದಿತು? ಕೆಲಸಕ್ಕೆ ಬಾರದ ಮಾತುಗಳನ್ನಾಡಿ ನನ್ನ ಮನಸ್ಸನ್ನೇಕೆ ನೋಯಿಸುವೇ? ಆ ಮಾತನ್ನು ಬಿಡು. ದಿನವೂ ಇದೇ ರಾಮಾಯಣವನ್ನೇ ಒದರುವಿಯಲ್ಲಾ? ಅದು ಹೋಗಲಿ? ಫಲಹಾರಕ್ಕೆ ಏನುಮಾಡಿರುವೆ? ಯೋಷೀ, ಸತ್ಯವನ್ನು ಹೇಳುವೆನು ಕೇಳು. ಸಮ್ರಾಟನೊಂದಿಗೆ ನಾನು ಭುಜಿಸಿದಾರಭ್ಯ ನಿನ್ನ ಪಾಕದಲ್ಲಿ ನನಗೆ ರುಚಿಯೇ ಕಂಡುಬರುವುದಿಲ್ಲ. ನಿನ್ನ ಅಡಿಗೆಯು ನೀರಸವಾಗುತ್ತಲಿದೆ, ಯೋಷೀ!"

"ಹೌದು ಹೌದು. ಸಮ್ರಾಟನ ಅಡಿಗೆಯಲ್ಲಿ ಮಾಂಸಾಹಾರವಿರುತ್ತದೆ. ಆದರಿಂದಲೇ ಅದು ತಮಗೆ ಹೆಚ್ಚು ರುಚಿ. ನನ್ನ ಅಡಿಗೆಯಲ್ಲಿ ರುಚಿ ಹೇಗೆ ಬರಬೇಕು? ಪಾಪ! ಈ ದಿನ ಇಲ್ಲಿ ಅನುಕೂಲವಿಲ್ಲ. ಸಮ್ರಾಟನ ಭೋಜನಕ್ಕೆ ದಯಮಾಡಿಸಬಹುದು."

"ಯೋಷೀ, ದಮ್ಮಯ್ಯ! ಕ್ಷುದ್ಬಾಧೆಯು ಮೀರಿದೆ. ಈ ದಿನ ಪಾಕವು ಹೇಗಿದ್ದರೂ ಅಮೃತಕ್ಕಿಂತಲೂ ರುಚಿಕರವಾಗಿರುತ್ತದೆ. ಸದ್ಯಃ ಏನು ಮಾಡಿರುವೆಯೋ ತಂದು ಹಾಕು."

ಯೋಷಿಯು ಪೃಥ್ವಿರಾಜನ ಪತ್ನಿ. ಯೋಷಿಯು, ಯೋಷಿಬಾಯಿಯೋ ಯೋಷೀಬೇಗವ್ಮೋ ತಿಳಿಯದು. ಬೇಗಮ್ ಎನಿಸಿಕೊಳ್ಳಲು ಯೋಷಿಯು ಒಪ್ಪಳು; ಪತಿಯು ಬಿಡನು. ಸಮ್ರಾಟ ಅಕಬರ ಚಕ್ರವರ್ತಿಯೊಂದಿಗೆ ಬಂಧುತ್ವವನ್ನು ಬೆಳಸಿ ತಮ್ಮ ಮತ, ದೇಶ, ಸ್ವಗೌರವಗಳನ್ನು ಮರೆತವರಲ್ಲಿ ಪೃಥ್ವಿರಾಜನೂ ಒಬ್ಬನು. ನಿಜವಾಗಿಯೂ ಸಮ್ರಾಟನು ತಮ್ಮನ್ನು ಪ್ರೇಮ-ದೃಷ್ಟಿಯಿಂದಲೇ ನೋಡುತ್ತಾನೆಂದು ಜಾತಿಗೆಟ್ಟ, ನೀತಿಗೆಟ್ಟ, ಈ ರಜಪೂತರ ತಿಳುವಳಿಕೆ. ಆದರೆ ಸಮ್ರಾಟನ ಅಂತರಂಗವು ಅವರಿಗೆ ಹೇಗೆ ಗೊತ್ತು ? ಸಮ್ರಾಟನು ಕಾಮಾಂಧ ಪಶು ! ರಜಪೂತ ಸ್ತ್ರೀಯರನ್ನು ಪ್ರೀತಿಸುತ್ತಿದ್ದನೇ ವಿನಹಾ ವೀರರನ್ನಲ್ಲ. ಹಿಂದೂ ದೇಶವು ಹಾಳಾದರೇನು ? ಉಳಿದರೇನು ? ತನ್ನ ಕಾಮಾಗ್ನಿಗೆ ರಜಪೂತವನಿತೆಯರ ಆಹುತಿಯು ಸರಿಯಾಗಿ ಬೀಳುತ್ತಿದ್ದರಾಯಿತು. ಬೆಂಕಿಯನ್ನು ಆಹಾರವೆಂದು ಭ್ರಮಿಸಿ ಗರಿಸೀದು ಬೀಳುವ ಪತಂಗದ ಹುಳುಗಳಂತೆ ರಜಪೂತ ಅಧಿನಾಯಕರು ಅಕಬರನ ನಸುನುಡಿಗಳಿಗೆ ಬೆರಗಾಗಿ ಅವನ ಕುಟಿಲಕ್ಕೆ ತುತ್ತಾಗುತ್ತಿದ್ದರು. ತಮ್ಮ ಸ್ವಂತ ಸಹೋದರಿ, ಹೆಣ್ಣುಮಕ್ಕಳು, ಪತ್ನಿಯರನ್ನೇ ಅವನಿಗೆ ಆಹುತಿಯನ್ನಾಗಿ ಕೊಡುತ್ತಿದ್ದರು. ಇಂತಹ ದೇಶದ್ರೋಹಿಗಳಿಗೆ ಧಿಕ್ಕಾರವಿರಲಿ ! ಪರದೇಶದರಸು ಎಷ್ಟು ವಿಶ್ವಾಸದಿಂದ ನಮ್ಮನ್ನು ಕಂಡರೂ ಅವನು ನಮ್ಮ ಹಿತಚಿಂತಕನೇ ? ಆದರೂ ಭಾರತಾಂಬೆಯ ಮಾಂಗಲ್ಯದ ರತ್ನಗಳೆಲ್ಲವೂ ಕಪ್ಪು-ಬಣ್ಣ ತಿರುಗಿರಲಿಲ್ಲ. ಒಂದು ರತ್ನ ಮಾತ್ರ, ಒಂದೇ ವಿಧವಾದ, ಅಚ್ಚಳಿಯದ, ಪೂರ್ಣ ಪ್ರತಾಪದ ದೇಶವಾತ್ಸಲ್ಯದಿಂದ ಕೂಡಿ ವಿಜೃಂಭಿಸುತ್ತಲಿತ್ತು. ಆ ರತ್ನವೇ ಮೇವಾಡದ ರಾಣಾ ಪ್ರತಾಪಸಿಂಹ ! ಪ್ರತಾಪಸಿಂಹನ ಪ್ರತಾಪದ ಬಗ್ಗೆ ಸಮ್ರಾಟನಿಗೆ ಹಳದೀ ಘಟ್ಟದಲ್ಲಿ ಪೂರ್ಣ ಪರಿಚಯವಾಗಿತ್ತು. ಶಕ್ತಿಸಿಂಹನ ಪಾದಘಾತದ ಪೆಟ್ಟು ಸಮ್ರಾಟನಪ್ರಿಯ ಕುವರ ಸೇಲೀಮನ ದವಡೆಯನ್ನು ಇನ್ನೂ ಬಿಟ್ಟಿರಲಿಲ್ಲ. ಸಮ್ರಾಟನು ವಿಶ್ವಪ್ರಯತ್ನ ಮಾಡಿದನು. ಸಾಧ್ಯವಾಗಲಿಲ್ಲ. ಇಡೀ ಹಿಂದೂಸ್ಥಾನವನ್ನೇ ಪಾದದಡಿಯಲ್ಲಿ ಧರಿಸಿರುವ ಸಮ್ರಾಟನಿಗೆ ಮೇವಾಡಿನ ಸಿಂಹವೊಂದು ಚಳ್ಳೆಹಣ್ಣು ತಿನ್ನಿಸಿತು. ಆ ಸಿಂಹದ ತಲೆಯನ್ನು ನೇವರಿಸಿದನು; ಸಿಂಹಕ್ಕೆ ಗೋವಿನ ಮಾಂಸದಾಸೆಯಿಟ್ಟನು. ಸಿಂಹಕ್ಕೆ ಉತ್ತಮನಾದ ಆರಾಮವಾದ ವಸತಿಗ

ಳನ್ನು ತೋರಿಸಿದನು. ಆದರೆ ಆ ಸಿಂಹವು ಅದೆಲ್ಲವನ್ನೂ ನೋಡಿ, "ಅಧಮ! ಬಾಯಿ ಮುಚ್ಚು ನೀತಿ ಕೆಟ್ಟವನೇ!" ಎಂದಿತು. ಸಿಂಹವನ್ನು ಬಲೆಗೆ ಹೇಗೆ ಕೆಡವಬೇಕೆಂಬುದೇ ಸಮ್ರಾಟನಿಗೆ ದೊಡ್ಡ ಸಮಸ್ಯೆಯಾಗಿದ್ದಿತು. ಏನು ಮಾಡಿಯಾನು? ದೇಶಾಭಿಮಾನವೆಂಬ ಕೊಬ್ಬಿನಿಂದ ತುಂಬಿದ ಆ ಕೇಸರಿಗೆ ಕೇಡನ್ನು ಹೇಗೆ ತಂದಾನು? ಸಿಂಹದ ಸ್ನೇಹ ದೊರೆತರೆ ಸ್ವಂತ ಮಗಳಾದ ಮೆಹರೆಯನ್ನು ಕೊಟ್ಟು ಪರಿಣಯ ಮಾಡಲು ನಿಶ್ಚಯಿಸಿದನು. ಆದರೆ ತನ್ನ ಪತ್ನಿಯಾದ ಲಕ್ಷ್ಮೀದೇವಿಯ ಪಾದಪ್ರಕ್ಷಳನವಾದ ಜಲವನ್ನು ಪಾನಮಾಡುವ ಯೋಗ್ಯತೆಯನ್ನೂ ಸಹಾ ಪಡೆಯದಿರುವ ಆ ಸಮ್ರಾಟನ ಕುವರಿಯ ಮೇಲಣ ಮೋಹಕ್ಕಾಗಿ ಆ ವೀರನು ದೇಶವನ್ನು ಮರೆಯುವನೇ? ಸಮ್ರಾಟನು ಸಮಯವನ್ನು ಕಾಯುತ್ತಾ ತಾಳ್ಮೆಯನ್ನು ತಾಳಿ ಸುಮ್ಮನಿದ್ದನು.

೨

ಅರಣ್ಯವಾಸ. ಮಹಾ ಕಠಿಣ ತಪಸ್ಸು. ಸಿಕ್ಕಿದರೆ ಆಹಾರವನ್ನು ತಿನ್ನುವುದು, ಇಲ್ಲದಿದ್ದರೆ ಉಪವಾಸವಿರುವುದು. ಅಲ್ಪಸ್ವಲ್ಪ ಸಿಕ್ಕಿದರೆ ಮಕ್ಕಳಿಗಿತ್ತು ಉಪವಾಸ ವ್ರತವನ್ನಾಚರಿಸುವುದು. ದೇಶಾಭಿಮಾನಿಗಳ ಪಾಡೆಲ್ಲಾ ಹೀಗೆಯೇ. ತಮ್ಮ ದೇಶವನ್ನು ತಾವು ನಿಷ್ಪಕ್ಷಪಾತದಿಂದ ಪ್ರೀತಿಸುವುದೇ ಅವರ ಶತಾಪರಾಧ! ಇದಕ್ಕೆ ಕಾರಾಗಾರವಾಸ! ಉಪವಾಸ ವ್ರತ! ಆದರೂ ಈ ಕಷ್ಟಗಳೆಲ್ಲವೂ ನಮ್ಮನ್ನು ಕರೆದೊಯ್ದು ಎಲ್ಲಿಗೆ ಬಿಡುವವು? ಸ್ವಾತಂತ್ರ್ಯದ ಮುಂಬಾಗಿಲಿಗೆ! ಹೀಗೆಂದೇ ತಿಳಿದು ವೀರನಾದ ರಾಣಾಪ್ರತಾಪಸಿಂಹನು ಬಂದ ಕಷ್ಟಗಳನ್ನೆಲ್ಲಾ ಸಹಿಸುತ್ತಿದ್ದನು. ಸೈನ್ಯವನ್ನು ಪುನಃ ಸೇರಿಸುತ್ತಿದ್ದನು. ಭಿಲ್ಲರ ಸಂಪೂರ್ಣ ಸ್ನೇಹ-ವಿಶ್ವಾಸ-ಸಹಾಯಗಳೂ ಇದ್ದುವು. ವೀರರಿಗೆ ಯಾರ ಸಹಾಯವು ಬೇಕು? ಅವರು ಸ್ವಾತಂತ್ರ್ಯಜೀವಿಗಳಲ್ಲವೇ?

ಪ್ರತಾಪಸಿಂಹನ ಜೀವನವು ಬಹು ಕಷ್ಟಕರವಾಗಿದ್ದಿತು. ಅರಣ್ಯದ ದುಷ್ಟ ಮೃಗಗಳ ಕಾಟದಿಂದ ಒಂದು ಕಡೆಯಿಂದ ಒಂದು ಕಡೆಗೆ ಪ್ರತಿದಿವಸವೂ ಬದಲಾಯಿಸಬೇಕಾಗಿದ್ದಿತು. ಒಂದು ಸಲ, ಮೂರು ದಿನಗಳವರೆಗೂ ಯಾವ ಆಹಾರವೂ ದೊರೆಯಲಿಲ್ಲ. ನಾಲ್ಕನೆಯ ದಿವಸ ಸ್ವಲ್ಪ ಕಾಡು

ಜೋಳವು ದೊರೆಕಿತು. ಲಕ್ಷ್ಮೀದೇವಿಯು ಎರಡು ರೊಟ್ಟಿಗಳನ್ನು ಮಾಡಿ ಒಂದನ್ನು ಮಕ್ಕಳಿಗೆ ಹಂಚಿ, ರಾತ್ರಿಗೋಸುಗ ಮತ್ತೊಂದನ್ನು ಒಂದೆಡೆಯಲ್ಲಿ ಔತಿಟ್ಟಿದ್ದಳು. ದೈವೇಚ್ಛೆಯಿಂದ ಬಾಲಕರ ರೊಟ್ಟಿಯನ್ನೂ, ತೆಗೆದಿಟ್ಟಿದ್ದ ರೊಟ್ಟಿಯನ್ನೂ, ಒಂದು ಕಾಡುಬೆಕ್ಕು ಅಪಹರಿಸಿಕೊಂಡುಹೋಯಿತು. ಮಕ್ಕಳಿಬ್ಬರೂ ದೀರ್ಘವಾಗಿ ಅಳಲಾರಂಭಿಸಿದರು. ಈ ದೃಶ್ಯವು ಉಕ್ಕಿನಂತೆ ಬಿರುಸು ಎದೆಯುಳ್ಳಂತಹ ಪ್ರತಾಪನ ಹೃದಯವನ್ನೇ ಕರಗಿಸಿತು. ದುಃಖದಿಂದ ನರಗಳುಬ್ಬಿದುವು. ಬಾಯಿಂದ ಮಾತು ಹೊರಡದಂತಾಯಿತು. ಮೀವಾರಿನ ಸೂರ್ಯನ ಪಾಡು ಅರಣ್ಯರೋದನ ಮಾಡುವ ಹಾಗಾಯಿತೇ? ಅಕಟಕಟಾ! ಜಗದೀಶ್ವರಾ! ನಮ್ಮ ಈ ಪ್ರಯಾಸವಾದ ಪ್ರವಾಸವು ಇನ್ನೂ ಎಷ್ಟು ದಿನಗಳವರೆಗೆ? ಮುದ್ದು ಮೀವಾರಿನ ಮುಖವನ್ನು ನಾವು ಯಾವಾಗ ನೋಡುವೆವು? ಎಂಬ ಶೋಕತರಂಗಾವಳಿಗಳು ವೀರಪತ್ನಿಯಾದ ಲಕ್ಷ್ಮೀದೇವಿಯನ್ನು ಬಾಧಿಸತೊಡಗಿದವು. ಕಡೆಗೆ ರಾಣನು ಅಕಬರನಿಗೆ ಕ್ಷಮೆಯ ಪತ್ರವೊಂದನ್ನು ಬರೆಯಲು ನಿಶ್ಚಯಿಸಿದನು. ಅಭಿಜ್ಞ ಶ್ರೇಷ್ಠನಾದ ರಾಣಾಪ್ರತಾಪಸಿಂಹನು ಅಜ್ಞರೊಡೆಯನಾದನು. ಪತ್ನೀ ಪುತ್ರರನ್ನು ಪೋಷಿಸಲು ತಾನು ಅಶಕ್ತನಾದೆನಲ್ಲಾ! ಎಂಬ ಚಿಂತೆಯಿಂದ ದಿನೇ ದಿನೇ ಕೃಶನಾಗುತ್ತಾ ಬಂದನು. ದುಃಖವು ರಾಣನನ್ನು ಪೂರ್ಣವಾಗಿ ವ್ಯಾಪಿಸುತ್ತ ಬಂದಿತೇ ವಿನಾ ಮಾಣದಾಯಿತು. ಅವನು ಧೈರ್ಯವನ್ನು ತಾಳಿ ಸಮ್ರಾಟನಿಗೆ ಶಿರಬಾಗುವ ಲೇಖನವೊಂದನ್ನು ತನ್ನ ಪತ್ನಿಗೆ ತಿಳಿಸದಲೆ ಬರೆದನು. ಪತ್ನಿಯಾದ ಲಕ್ಷ್ಮೀದೇವಿಗೆ ಈ ವಾರ್ತೆಯು ಮುಟ್ಟಿದ್ದಲ್ಲಿ ಆಕೆಯು ನಿರಾಶೆಯಿಂದ ಬಸವಳಿದು ಕೂಡಲೆ ಪ್ರಾಣತ್ಯಾಗ ಮಾಡಿಯಾಳೆಂಬ ಸಂದೇಹದಿಂದ ರಾಣನು ಅತಿ ಪ್ರಾಮುಖ್ಯವಾದ ಈ ವಿಷಯವನ್ನು ಮರೆ ಮಾಡಿಟ್ಟನು. ಅಯ್ಯೋ! ಇಂದಿನ ದಿನ ಮೀವಾರಿನ ಕಳಸವು ಕಳಚಿಬಿದ್ದಿತೇ? ರಾಣಾಪ್ರತಾಪಸಿಂಹನೂ ಕೂಡ ಹೂಣರಸನ ಅಡಿಯಾಳಾದನೇ!

ಪತ್ರವು ವೇಳೆಗೆ ಸರಿಯಾಗಿ ಸಮ್ರಾಟನ ಹಸ್ತವನ್ನು ಸೇರಿತು. ಶ್ರಮೈಪಟ್ಟು ಅರಣ್ಯವನ್ನೆಲ್ಲಾ ಒಂದು, ಔಷಧದ ಬಳ್ಳಿಗಾಗಿ ಶೋಧಿಸುತ್ತಿರುವವನಿಗೆ ಅದೇ ಬಳ್ಳಿಯು ಕಾಲಿಗೆ ಬಂದು ತೊಡರಿಕೊಂಡರೆ ಎಷ್ಟು ಆನಂದ

ವುಂಟಾಗುವುದೋ ಸಮ್ರಾಟ ಅಕಬರನಿಗೂ ಅದೇ ಬಗೆಯ ಆನಂದವಾಯಿತು. ಹೆಮ್ಮೆಯು ಇಮ್ಮಡಿಸಿತು. ತನ್ನನ್ನು ಮೀರಿಸಿರುವವರಿಲ್ಲ ; ಎಂಬ ಉಗ್ಗಡಣೆಯುಂಟಾಯಿತು. ತನ್ನನ್ನು ತಾನೆ ಸ್ತುತಿಸಿಕೊಂಡನು. ಈ ಆನಂದ ಸಂಭ್ರಮಕ್ಕೆಂದು ದೊಡ್ಡ ಔತಣವನ್ನಾರಂಭಿಸಿದನು. ತನ್ನ ನಿಕರಕ್ಕೆಲ್ಲಾ ಮನಸ್ವೀ ದಾನಮಾಡಿದನು ರಾಣೀವಾಸದವರ ಹರ್ಷಕ್ಕಾಗಿ 'ಖುಸ್‌ರೋಜ್' ಹಬ್ಬವನ್ನು ಮಾಡಹೇಳಿದನು. 'ಖುಸ್ ರೋಜ್' ಹಬ್ಬವು ಅಕಬರನ ಅರಮನೆಯಲ್ಲಿ ವರ್ಷಂಪ್ರತಿಯಲ್ಲಿಯೂ ಆಗತಕ್ಕ ವಸ್ತು-ಪ್ರದರ್ಶನ ಮತ್ತು ಔತಣ. ಸಾಮಂತ ಅರಸರ, ಮತ್ತು ಸರದಾರರ ಮನೆಯ ಸ್ತ್ರೀಯರೆಲ್ಲರೂ ತಾವೇ ರಚಿಸಿರತಕ್ಕ ಸಾಮಾನುಗಳನ್ನು ತಂದು ಅಲ್ಲಿ ಪ್ರದರ್ಶಿಸುವುದು,'ನಿಯಮವಾಗಿತ್ತು. ಸಮ್ರಾಟನೂ, ಅವನ ರಾಜ್ಞಿಯರೂ ಅವುಗಳನ್ನು ನೋಡಿ ತಕ್ಕಂತೆ ಬಹುಮಾನ ಮಾಡುತ್ತಿದ್ದರು. ಸಮ್ರಾಟನ ಬಹುಮಾನದ ಚಂದವೇ ಚಂದ! ರೂಪವತಿಯಲ್ಲದ ರಮಣಿಯು ವಿಶೇಷ ನಾಜೂಕಾಗಿಯೂ ರಮ್ಯವಾಗಿಯೂ ಇರುವ ಸಾಮಾನುಗಳನ್ನು ಪ್ರದರ್ಶನಕ್ಕಾಗಿ ತಂದಿಟ್ಟಿದ್ದರೂ ಅದರ ಕಡೆಗೆ ಸಾಮ್ರಾಟನ ದೃಷ್ಟಿಯು ಎಂದೂ ಹೋಗದು. ರಂಭೆ, ಊರ್ವಶಿಯರನ್ನೆದುರಿಸುವ ರೂಪವತಿಯರಾದ ಉತ್ಪಲಾಕ್ಷಿಯರು ಬಹು ವಿಕಾರವಾದ ಸಾಮಾನುಗಳನ್ನು ತಂದಿದ್ದರೂ ಅವುಗಳ ಮೆಚ್ಚಿಗೆಯೇ ಮೆಚ್ಚಿಗೆ! ಅವುಗಳಿಗೆ ಮಾಡುವ ಗೌರವ, ಬಹುಮಾನಗಳೇ ಬೇರೆ! ಈ 'ಖುಸ್ ರೋಜ್' ಹಬ್ಬಕ್ಕೆ ಸರ್ವರೂ ಬರಬೇಕೆಂದು ಸಮ್ರಾಟನ ಆಜ್ಞೆ.

ಯೋಷಿಯು ಹೋಗಲೊಲ್ಲಳು ; ಪೃಥ್ವಿಯು ಬಿಡಲೊಲ್ಲನು ; ಯೋಷಿಯ ರೂಪ ಲಾವಣ್ಯಗಳಿಂದ ತನಗೇನಾದರೂ ಸಮ್ರಾಟನ ವಿಶ್ವಾಸವು ಬರಲೆಂದು ಪೃಥ್ವಿಯ ಹಾರೈಕೆ! ಪಶುವಿಗೆ ಮುಖ ತೋರಿಸಬೇಕಲ್ಲಾ ಎಂದು ಯೋಷಿಗೆ ಸಂಕಟ! ಯೋಷಿಯು ಅಕಬರನ ಯೋಗ್ಯತೆಯನ್ನು ಚನ್ನಾಗಿ ಬಲ್ಲವಳಾಗಿದ್ದುದರಿಂದ ವಿಶೇಷ ಭಯಾನ್ವಿತಳಾಗಿದ್ದಳು. ತನ್ನ ಜಾಣ್ಮೆಯನ್ನೆಲ್ಲಾ ಪ್ರಯೋಗ ಮಾಡಿದಳು. ಏನು ಹೇಳಿದರೂ ಪೃಥ್ವಿಯು ಹಿಂದೆಗೆಯದಾಗಲು ಕಡೆಗೆ ಅವಳು ಪತಿಯ ಸಲುವಾಗಿ 'ಖುಸ್ ರೋಜ್'ಗೆ ಹೋಗಲು ನಿಶ್ಚಯಿಸಿದಳು.

ಹಬ್ಬದ ಗೊಂದಲವು ಮುಗಿಯಿತು. ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಯೋಷಿಯೂ ಮನೆಗೆ ಬಂದಳು. ಯೋಷಿಯು ಬಂದ ವೇಳೆಯಲ್ಲಿ ಆಸ್ಥಾನಕವಿಯು ಕವನವನ್ನು ಕಟ್ಟುತ್ತಿದ್ದನು. ಯೋಷಿಯ ಮುಖದಲ್ಲಿ ರಮ್ಯವಿಲ್ಲ, ನಗೆಯಿಲ್ಲ, ಹರ್ಷವಿಲ್ಲ. ಕ್ರೋಧವು ಉಕ್ಕುತ್ತಿದ್ದಿತು. ಅವಳು ಗೃಹಕ್ಕೆ ಬಂದವಳು ನೇರವಾಗಿ ತನ್ನ ಕೆಲಸಕ್ಕೆ ಹೋಗದೆ ಪತಿಯ ಮುಂದೆ ಕವನವನ್ನು ಈಕ್ಷಿಸುತ್ತ ನಿಂತಳು.

ಪೃಥ್ವಿ—ಯೋಷಿ, ಯಾವಾಗ ಬಂದೆ? ಬಾ! ಬಾ! ಕವನದ ರಮ್ಯತೆಯಲ್ಲಿ ನಿನ್ನ ಆಗಮನವು ತಿಳಿಯಲೇ ಇಲ್ಲ. ಯೋಷಿ! ಇಂದಿನ ದಿನ ಕವನವು ಬಹು ಸೊಗಸಾಗಿ ಬಂದಿದೆ. ಪ್ರಾಸವೆಲ್ಲವೂ ಬಹಳ ಚೆನ್ನಾಗಿ ಕೂಡಿದೆ. ಮುಖ್ಯ, ಸಮ್ರಾಟನ ಅದೃಷ್ಟವೆಂದೇ ಹೇಳಬೇಕು.

ಯೋಷಿ—ಕವನ, ಕವನ! ಕವನವು ಸೊಗಸಲ್ಲವೇ! ಕವನವು ರಮ್ಯವಲ್ಲವೇ! ನಿಮಗೆ ನಿಮ್ಮ ಕವನ, ನಿಮ್ಮ ಸಮ್ರಾಟ, ಇವೆರಡೇ ಪೂಜ್ಯ ವಸ್ತುಗಳಲ್ಲದೆ ನಿಮ್ಮ ಪತ್ನಿಯ ಅಗಾಧವಾದ ಪಾತಿವ್ರತ್ಯವು ಪೂಜ್ಯವಾದುದಲ್ಲ! ನೀಚ ಸ್ತುತಿ ಮಾಡುವ ನಿಮ್ಮ ನಾಲಿಗೆಯು ಸೀಳಿ ಹೋಗದೇಕೆ?

ಪೃಥ್ವಿ—ಯೋಷಿ, ಇದೇನು ನಿನ್ನ ಆವೇಶ? ಇದೇನು ನಿನ್ನ ಕೋಪ? ಯೋಷೀ, ಸ್ಥೈರಣೆಯನ್ನು ತಂದುಕೋ, ನಿಧಾನವಾಗಿ ಹೇಳು. ಏನು ಆಯಿತು? ವಿಶೇಷವೇನು? ನಿನಗೆ ಕೋಪ ಬರಲು ಕಾರಣವೇನು? ಎಲ್ಲವನ್ನೂ ನಿಧಾನವಾಗಿ ಹೇಳು?

ಯೋಷಿ—ಏನು! ಸ್ಥೈರಣೆಯೋ! ನಿಧಾನವೇ! ಸ್ವಪತ್ನಿಯ ಮಾನವನ್ನು ಕಾಪಾಡುವ ಶಕ್ತಿಯಿಲ್ಲದಿರುವ ನಪುಂಸಕರಾದ ನಿಮ್ಮಲ್ಲಿ ನಾನು ಹೇಳತಕ್ಕದ್ದೇನಿದೆ? ನಾನು ಹೆಂಗಸು; ಆದರೂ ನನ್ನ ಮೇಲೆ ಜಗದಂಬೆಯ ಅನುಗ್ರಹವಿದೆ! ನಾನೇ ಸೇಡನ್ನು ತೀರಿಸಿಕೊಳ್ಳುತ್ತೇನೆ. ನಾನೇ ನಿಮ್ಮ ಸಮ್ರಾಟನ ಸಾಮ್ರಾಜ್ಯಕ್ರಾಂತಿಗೆ ಮೂಲ ದೇವತೆಯಾಗುತ್ತೇನೆ.

ಪೃಥ್ವಿ—ಯೋಷೀ, ಏನು! ಸಮ್ರಾಟನು ನಿನ್ನನ್ನು ಹಿಂಸಿಸಿದನೇ?

ಯೋಷಿ—ಹಿಂಸೆ ಪಡಿಸಿಕೊಳ್ಳಲು ನಾನೇನು ನಿಮ್ಮಂತಹ ಷಂಡಳಲ್ಲ. ಈ ದಿನ ಈ ಚೂರಿಯು, ಈ ದಿವ್ಯ ಖಡ್ಗವು, ನನ್ನ ಬಳಿಯಲ್ಲಿಲ್ಲ

ದಿದ್ದರೆ ನಿಮ್ಮ ಹೆಂಡತಿಯು ಬಲಾತ್ಕಾರದಿಂದ ಸಮ್ರಾಟನ ವೇಶ್ಯೆಯರಲ್ಲಿ ಒಬ್ಬಳಾಗುತ್ತಿದ್ದಳು.

ಪೃಥ್ವಿ—ಏನಂದೆ ಯೋಷಿ !

ಯೋಷಿ—ಪ್ರಭೂ ! ಏನೂ ಇಲ್ಲ ನಿಮ್ಮಲ್ಲಿ ಪುಂಸತ್ವವೂ ಕ್ಷಾತ್ರ ತೇಜವೂ ಎಳ್ಳಷ್ಟಾದರೂ ಇನ್ನೂ ಇದ್ದರೆ ಸಮ್ರಾಟನ ಮೇಲೆ ಪಣಕಟ್ಟಿ, ಪ್ರತಾಪನ ಮನೆಹೋಗಿ, ಸಮ್ರಾಟನ ಕೊನೆಗಾಲವನ್ನು ಕೂಡಲೆ ತಂದು, ನಿಮ್ಮ ಹಿಂದೂಭಗಿನಿಯರ ಅಮೂಲ್ಯವಾದ ಮಾನಗಳನ್ನು ರಕ್ಷಿಸಿರಿ. ನಾನು ಸಹಿಸಲಾರೆ; ಇನ್ನೊಂದು ಕ್ಷಣಕಾಲವೂ ಸಹಿಸಲಾರೆ. ಪಾಪಸಂಭೂತ ವಾದ ಈ ಭೂಮಿಯಲ್ಲಿ ಇನ್ನೊಂದು ಘಳಿಗೆಯೂ ಇರಲಾರೆ. ನನ್ನ ಕೊನೆಯ ಪ್ರಾರ್ಥನೆಯನ್ನು ನಡೆಸಿಕೊಡಿರಿ. ಸತ್ಯವಾದ ಕಾರ್ಯರಂಗಕ್ಕೆ ಇಳಿದು ಪ್ರಾಣವನ್ನು ಒಪ್ಪಿಸಿದರೂ ಅಡ್ಡಿಯಿಲ್ಲ. ಪಾಮರನಾದ ಸಮ್ರಾಟನ ಸೇವೆಮಾಡಿ ಕುನ್ನಿಯಂತೆ ಸಾಯುವದಕ್ಕಿಂತ ! ದೇಶಕ್ಕಾಗಿ ಪ್ರಾಣ ಬಿಟ್ಟರೆ ವೀರವಲಯದಲ್ಲಿ ನಿಮಗೊಂದು ಸ್ಥಾನಸಿಕ್ಕುತ್ತದೆನ್ನುತ್ತಾ ತನ್ನ ಹಸ್ತದ ಲ್ಲಿದ್ದ ಮೋಹಳದಿಂದ ಹೃದಯವನ್ನಿರಿದುಕೊಂಡು ಪತಿಯ ಪಾದಗಳ ಮೇಲೆ ಉರುಳಿ ಪ್ರಾಣವನ್ನು ತ್ಯಜಿಸಿದಳು.

೩.

ಯೋಷಿಯ ಸ್ಫೂರ್ತಿಯುತ ಭಾಷಣಕ್ಕೆ ಬೆರಗಾಗಿ, ಆದರ್ಶ, ವಾಸ್ತವಿಕ ಜಗತ್ತುಗಳ ಮಧ್ಯೆದಲ್ಲಿ ತೂಗಾಡುತ್ತಿದ್ದ ಪೃಥ್ವಿಗೆ, ಘಟನೆಯ ವಸ್ತುಸ್ಥಿತಿಯು ಮೊದಲು ಮನವರಿಕೆಯಾಗಲಿಲ್ಲ ಯೋಷಿಯು ಯಾತಕ್ಕಿಂತು ಉದ್ವಿಗ್ನಳಾಗಿದ್ದಾಳೆ ? ಅವಳಿಗೆ ಅರಮನೆಯಲ್ಲಾದ ಅವಮಾನವಾದರೂ ಏನು ? ಸಮ್ರಾಟನು ನೀತಿ ಪಥವನ್ನು ಅತಿಕ್ರಮಿಸಿದನೇ ? ಎಂಬ ಯೋಚನೆಗಳು ಬರಲಾರಂಭಿಸಿದವು. ಕ್ಷಣ ಕಾಲಾನಂತರ ಅವನು ಜಂಜಡವನ್ನು ಜರಿದು, ಮಂಡಿಯೂರಿ ಕುಳಿತು, ಯೋಷಿಯನ್ನು ಮುಟ್ಟಿ, ನಿರೀಕ್ಷಿಸ ಹತ್ತಿದನು. ನಿರ್ಮಲವಾದ ತೇಜಸ್ಸೂ, ನಿದ್ರಿಸುತ್ತಿದ್ದ ದೇವಿಯ ಮುಖಕಾಂತಿಯೂ, ರಾಶಿರಾಶಿಯಾಗಿ ಬಿದ್ದಿದ್ದ ಕೇಶರಾಶಿಯೂ, ಸತ್ಯ ಆಗ್ರಹದ ಅಪೂರ್ವ ಶೋಭೆಯೂ, ಮುಖಕಮಲದ ಮೇಲೆ ಅಧರದ ಅಂಚಿನಲ್ಲಿ ಮಗುವಿನಂತಹ ಕಿರಿನಗೆಯೂ, ಇವೆಲ್ಲವುಗಳೂ ಯೋಷಿಯು ಮಲಗಿ

ನಿದ್ರಿಸುತ್ತಿರುವಳೇ ಎಂದೆನಿಸುತ್ತಿತ್ತು. ಪೃಥ್ವಿಯು ಅವಳನ್ನು ಮತ್ತೂ ಮುಟ್ಟಿದನು. ಮುಖವನ್ನು ಮೃದುವಾಗಿ ನೇವರಿಸಿದನು. ಅದು ಶೀತಲವಾಗಿದ್ದಿತು. ಜೀವರಾಹಿತ್ಯದ ಅರಿವೇ ಅವನಿಗೆ ಇಲ್ಲದಿದ್ದಿತು. ಅಲುಗಿಸಿ, ಇನಿದನಿಯಿಂದ ಎಚ್ಚರಿಸಲೆತ್ನಿಸಿದನು "ಒಲವೇ-ಕಣ್ಮಣಿಯೇ ಹೃದಯೇಶ್ವರಿಯೇ" ಎಂದು ಹಲವು ಬಗೆಯಾಗಿ ಸಂಬೋಧಿಸಿದನು. ನೀರವ. ನಿಶ್ಚಲ ಮುಖಕ್ಕೆ ಮುಖವಿಟ್ಟು "ದೇವೀ, ನನ್ನ ಅಪರಾಧವನ್ನು ಕ್ಷಮಿಸು," ಎಂತದನು. ಶವವು ಉತ್ತರ ಕೊಡಬಲ್ಲುದೇ ?

ಕೊನೆಗೆ-ಕೊನೆಗೆ ಯೋಷಿಯು ತನ್ನನ್ನು ಬಿಟ್ಟು ತೆರಳಿದಳೆಂದು ಪೃಥ್ವಿಯು ಅರಿತನು. ತನ್ನ ಜೀವನ ಸರ್ವಸ್ವವಾದ-ತನ್ನ ಗೃಹದ ಮಂಗಳ ದೇವಿಯಾದ ಯೋಷಿಯು ಅನಂತವಾದ, ಪವಿತ್ರವಾದ ಹಾಗೂ ಶಾಶ್ವತವಾದ ಸ್ವರ್ಗಧಾಮಕ್ಕೆ ಹೊರಟು ಹೋದಳೆಂದು ಗ್ರಹಿಸಿದನು. ಮನದ ಬೆಬ್ಬಳದಿಂದ ಮುಖವು ಕೆಂಪೇರಿತು. ಘರ್ಮ-ಬಿಂದುಗಳು ಧಾರಾಕಾರವಾಗಿ ಸುರಿಯಲಾರಂಭಿಸಿದವು. ಕಂಗಳಲ್ಲಿ ಅಶ್ರುಪ್ರವಾಹವು ಹರಿಯ ಹತ್ತಿತು. ದುಃಖದ ಪೂರ್ಣತೆಯಿಂದ ಮಾತೇ ನಿಂತುಹೋಯಿತು. "ನಾನೇ ಕೈಯಾರೆ ಯೋಷಿಯನ್ನು ಕೊಂದೆನಲ್ಲಾ !" ಎಂದು ಅವಳ ಹಿಂದಿನ ನಡತೆಯಲ್ಲವನ್ನೂ ನೆನೆದನು. "ನನ್ನಂತಹ ಪಾಮರನಿಗೆ, ತುಚ್ಛಕ್ರಿಮಿಗೆ, ಯೋಷಿಯಂತಹ ದೇವತೆಯು ಪತ್ನಿಯೇ ?" ಎಂದು ತನ್ನ ಅಲ್ಪತೆಯನ್ನು ನೆನೆದನು. ಯೋಷಿಯು ಏತಕ್ಕೆ ಸುವನ್ನರ್ಪಿಸಿದಳೆಂದು ದೀರ್ಘವಾಗಿ ಯೋಚಿಸಿದನು.

ಯೋಚಿಸುತ್ತ ಯೋಚಿಸುತ್ತ ಪೃಥ್ವಿಯ ಪರಿಸ್ಥಿತಿಯೇ ಬೇರೆಯಾಗುತ್ತ ಬಂದಿತು. ಮೈಯಲ್ಲಿ ರೋಮಾಂಚವುಂಟಾಯಿತು. ಕಂಬನಿಯಿಂದ ಕಂಗೆಟ್ಟಿದ್ದ ಮುಖವು ಕಳೆಗೊಂಡಿತು. ದೇಹಾದ್ಯಂತವೂ ಕಂಪಾಯಮಾನ ಹೊಂದಿ ಕಾದ ಕಬ್ಬಿಣದಂತಾಯಿತು. ಮನಸ್ಸಿನಲ್ಲಿ ಯಾವದೋ ಸಂಕಲ್ಪ ಮಾಡಿಕೊಂಡು ಎದ್ದು ನಿಂತನು. ಅಂದಿನ ನಿಲುವಿಕೆಯ ಚಲುವೇ ಬೇರೆ. ಸಮ್ರಾಟನೆದುರಿಗೆ ಕವನಗಳನ್ನು ಹಿಡಿದು ನಿಂತು, ಗಂಟಲನ್ನು ಸರಿಮಾಡಿಕೊಳ್ಳುತ್ತಾ ನಡುಕಟ್ಟನ್ನು ಬಿಗಿಸಿಕೊಳ್ಳುತ್ತಾ, ನುಡ ಬಗ್ಗಿಸಿ ನಿಂತು, ಅವನು-ಸಮ್ರಾಟನು, ನಕ್ಕರೆ ತಾನೂ ನಗುವುದೂ. ಅವನ ಮುಖ ನೀಳ

ಮಾಡಿದರೆ ತಾನೂ ನೀಳ ಮಾಡುವುದೂ ಅಸ್ಪುಟವಾಗಿ ಭಟ್ಟಂಗಿಯ ಮಾತು ಗಳನ್ನಾಡುತ್ತಿದ್ದುದೂ ಆತನಿಗೆ ನೆನಪಾಯಿತು. ರೋಷಾವೇಶದಿಂದ ಕೇಶ ವನ್ನು ಹಿರಿದನು. ವಸ್ತ್ರಭೂಣಗಳನ್ನು ಹರಿದೊಗೆದನು. ಅಲಂಕಾರದ ಆಭರಣಗಳನ್ನು ಛಿನ್ನಭಿನ್ನ ಮಾಡಿ ಉನ್ಮತ್ತನಂತೆ ಬಿಸುಡಿದನು. ಸಮ್ರಾ ಟನ ತೈಲ ಚಿತ್ರಕ್ಕೆ ಥುತ್ಕಾರ ಮಾಡಿ, ಅದರ ಮೇಲೆ ಪಾದವನ್ನು ನೆಟ್ಟನು. ಗೋಡೆಗೆ ನೇತು (ತೂಗು) ಹಾಕಿದ್ದ ಮಣಭಾರದ ಕತ್ತಿಯನ್ನು ಒರೆ ಯಿಂದ ಲೀಲಾಮಾತ್ರದಲ್ಲಿ ಹಿರಿದು, ಚುಂಬಿಸಿ, ನಮಿಸಿ, ಯೋಷಿಯ ಶವದ ಮೇಲಿಟ್ಟು

"ದೇವೀ, ಈ ಖಡ್ಗವು ನಿನ್ನ ಮಾನಾಪಹರಣ ಮಾಡಲೆತ್ನಿಸಿದವನ ಚಂಡಾಡಲೆತ್ನಿಸಿವುದು. ಸಾಧ್ಯವಲ್ಲದಿದ್ದರೆ ನನ್ನ ಶಿರವನ್ನೇ ಚಂಡಾಡಿ ನಿನ್ನ ಚರಣತಲದಲ್ಲರ್ಪಿಸುವುದು'' ಎಂದು ಶಪಥ ಮಾಡಿದನು.''

ಪೃಥ್ವಿಯಲ್ಲಿ ಹುದುಗಿದ್ದ ವೀರರಕ್ತವು ಮೇಲಕ್ಕೆ ಉಕ್ಕಿತು. ಯೋಷಿಯ ಶವದ ಮೇಲೆ ಹಸ್ತವನ್ನಿಟ್ಟು ಪ್ರತಾಪನಿಗೆ ಸಹಾಯ ಮಾಡುವೆನೆಂದು ಪ್ರಮಾಣ ಮಾಡಿದನು. ಪ್ರಮಾಣವು ಕೂಡಲೆ ಫಲಿಸಲೆಂದು ಅಕಬರನ ಸೇವೆಗೆ ನಮಸ್ಕರಿಸಿ ಪ್ರತಾಪನೆಡೆಗೆ ಪ್ರಯಾಣ ಮಾಡಿದನು.

* * * * *

ರಾಣನ ಕುವರಿಯಾದ ತಾರೆಯು ಮೃತಳಾಗಿದ್ದಳು. ಪ್ರತಾಪನು ಪೃಥ್ವಿಗೆ ಆದರದಿಂದ ಸ್ವಾಗತವನ್ನು ಕೊಟ್ಟನು. ಇಬ್ಬರೂ ನೊಂದವರು. ಒಬ್ಬನು ದೇಶಕ್ಕಾಗಿ ತನ್ನ ಪತ್ನಿಯನ್ನೂ, ಮತ್ತೊಬ್ಬನು ದೇಶಕ್ಕಾಗಿ ತನ್ನ ಪ್ರಾಣಪದಕವಾದ ಪ್ರಿಯ ಕುವರಿಯನ್ನೂ ಕಳೆದುಕೊಂಡಿದ್ದವರು.

ಪ್ರತಾಪ—ಪೃಥ್ವಿರಾಜರೇ, ಏನು! ತಾವಿಲ್ಲಿ ದಯಮಾಡಿಸಿದುದು?

ಪೃಥ್ವಿ—ರಾಣಾಜೀ, ಅಕಬರನಿಗೆ ಶರಣಾಗತನಾಗುವೆನೆಂದು ನೀವು ಪತ್ರವನ್ನು ಬರೆದುದು ನಿಜವೇ?

ಪ್ರತಾಪಃ—ಹೌದು? ನಾನೇ ಬರೆದೆ. ದೇವಿಗೆ ತಿಳಿಸದೇ ಬರೆದೆ.

ಪೃಥ್ವಿ—ರಾಣಾಜೀ, ತಮ್ಮ ಪತ್ರದ ತಾತ್ಪರ್ಯವನ್ನು ಮರೆಯಿರಿ. ಹಿಂದುಸ್ಥಾನವೇ ಈಗ ನಿಮ್ಮ ಕಡೆಗೆ ಪೂರ್ಣವಾಗಿ ಅಗಲಿಸಿದ ದೃಷ್ಟಿ

ಯಿಂದ ನೋಡುತ್ತಲಿದೆ. ಸನಾತನವಾದ, ಪರಮಪೂಜ್ಯವಾದ ಆರ್ಯ ಮಹಿಳೆಯರ ಪಾತಿವ್ರತ್ಯಕ್ಕೆ ಕೊಡಲಿಯ ಪೆಟ್ಟು ಬೀಳಲಾರಂಭಿಸಿದೆ. ಅನೇಕ ಮಹಿಳೆಯರು ಪೆಟ್ಟು ತಿಂದು ನರಳುತ್ತಿರುವರು; ಆದರೆ ಯೋಷಿ! ಆ ನನ್ನ ಯೋಷಿ! ಯೋಷಿಯೊಬ್ಬಳು ಆರ್ಯ ಸಂಸ್ಕೃತಿಗೋಸ್ಕರ ಪ್ರಾಣವನ್ನೊಪ್ಪಿಸಿದಳು.

ಪ್ರತಾಪ—ಅರಸರೇ, ನಿಮ್ಮ ನುಡಿಗಳೊಂದೂ ನನಗೆ ಅರ್ಥವಾಗಲಿಲ್ಲ. ಪೂಜ್ಯಳಾದ ಯೋಷಿದೇವಿಯು ಮೃತಳಾದಳೇ ?

ಪೃಥ್ವಿ—ಅಹುದು; ಯೋಷಿಯು ಮೃತಳಾದಳು. 'ಖುಸ್‌ರೋಜ್' ಹಬ್ಬಕ್ಕೆ ನಾನೇ ಬಲವಂತದಿಂದ ಆಕೆಯನ್ನು ಕಳುಹಿಸಿದೆ. ಪೈಶಾಚಿಕ ಆಶೆಯಿಂದ ಸಮ್ರಾಟನು ಯೋಷಿಯ ಮೇಲೆ ಕೈಹಾಕಲು, ಮೊನೆಯಾದ ತನ್ನ ಚೂರಿಯಿಂದ ಅವಳು ತನ್ನ ಅಮೂಲ್ಯವಾದ ಮಾನವನ್ನು ಕಾಪಾಡಿಕೊಂಡಳು. ನಿನ್ನೆಯ ದಿವಸ ನನಗೆ ತನ್ನ ಸಂದೇಶನ್ನಿತ್ತು ಆತ್ಮಾರ್ಪಣ ಮಾಡಿಬಿಟ್ಟಳು.

ಪ್ರತಾಪ—ಏನು? ಆ ಪೂಜ್ಯಳು ಆತ್ಮಹತ್ಯ ಮಾಡಿಕೊಂಡಳೇ! ಏನು! ಹೀನ ತುರುಷ್ಕನಾದ ಅಕಬರನು ಭಾರತ ವೀರರ ಮೇಲೆ ಕೈಹಾಕುತ್ತಿದ್ದುದನ್ನು ಮುಗಿಸಿ, ಭಾರತ ರಮಣಿಯರ ಮೇಲೆ ಕೈಹಾಕ ತೊಡಗಿದನೇ! ಇರಲಿ, ಇದರ ಶಾಸನವನ್ನು ನಾನು ಮಾಡುವೆನು. ನನ್ನ ಜನ್ಮವಿರುವವರೆಗೂ ಅಕಬರನಿಗೆ ಶರಣು ಹೋಗೆನು. ಇದಕ್ಕೆ ಲೋಕಮಾತೆಯಾದ ಭಾರತಾಂಬೆಯೇ ಸಾಕ್ಷಿ. ಪೃಥ್ವೀ ರಾಜರೇ! ದೃಡಪಟುತ್ವದಿಂದ ನನಗೆ ಸಹಾಯ ಮಾಡಿರಿ. ಸಮ್ರಾಟನ ಸಾಮರ್ಥ್ಯವನ್ನಾದರೂ ನೋಡುವಾ!

೪.

ದೃಢವಾದ ಪ್ರತಿಜ್ಞೆಯೊಂದೇ ಬೇಕಾಗಿದ್ದುದು. ದೈವಬಲವು ಹಿಂದೆಯೇ ಇತ್ತು. ಪ್ರತಾಪನ ಸಹೋದರನಾದ ಶಕ್ತಿಸಿಂಹನು ತನ್ನ ಭಿಲ್ಲರೊಡನೆ ಅಣ್ಣನಿಗಾಗಿ ಕಾದಲು ಸಿದ್ಧನಾದನು. ರಾಣನ ವೃದ್ಧಮಂತ್ರಿಯಾದ ಭೀಮಸಿಂಹನು ತಾನು ಇದುವರೆಗೆ ಗಳಿಸಿದ್ದ ಹಣವನ್ನೆಲ್ಲಾ, ನಿರ್ವಂಚನೆಯಾಗಿ ರಾಣನ ಪಾದಪದ್ಮಗಳ ಮೇಲಿಸಿದನು ಪೃಥ್ವಿ ರಾಜನಲ್ಲಿ

ಅಳಿದಿದ್ದ ಕ್ಷಾತ್ರಧರ್ಮ, ಕ್ಷಾತ್ರತೇಜಸ್ಸುಗಳೆಲ್ಲ 'ಪುನರುಜ್ಜೀವನ'ವಾಗುತ್ತ ಬಂದವು. "ಭಾಪು ! ಭಾಪು ! ಆರ್ಯಾವರ್ತಕ್ಕಾಗಿ ಪ್ರಾಣಕೊಡಲು ಸಿದ್ಧರಾಗುವ ವೀರಾಗ್ರಣಿಗಳಿಗೆಲ್ಲಾ ಸಹಾಯವು ಹೇಗೆ ಒಂದರ ಮೇಲೊಂದು ಒದಗುವುವು. ಮುಖ್ಯವಾಗಿ, "ಮಾತೆಯ ಸೇವೆಯಲ್ಲಿದ್ದ ಆ ವೀರರ ಅನಿರ್ವಚನೀಯವಾದ ಪ್ರೇಮವೇ ಇದಕ್ಕೆ ಕಾರಣ."ವೆಂದು ಜನತೆಯು ಜಯಜಯಕಾರ ಮಾಡಲಾರಂಭಿಸಿತು.

ಯುದ್ಧವೂ ಕೈಗೂಡಿತು. ಕೈಬಿಟ್ಟು ಹೋಗಿದ್ದ ದುರ್ಗಗಳೆಲ್ಲಾ ಒಂದೊಂದಾಗಿ ರಾಣನ ಕೈಸೇರತೊಡಗಿದವು. ಕಮಲಮೇರುವೂ ಕೈಸೇರಿತು, 'ಮಹಬತ್‌ಖಾನ್' ಮೊದಲಾದ ಸಮ್ರಾಟನ ಕಡೆಯ ಅತಿರಥ ಮಹಾರಥರೆಲ್ಲರೂ ಸೆರೆ ಸಿಕ್ಕಿದರು. 'ಹಷಬಜ್‌ಖಾನನ ಸೈನ್ಯವನ್ನು ರಾಣನು ಬಿರುಗಾಳಿಯಂತೆ ಎಬ್ಬಿಸಿಕೊಂಡು ಹೋದನು. ಹೇಡಿಯಾದ ಮಾನಸಿಂಹನು ಹಳದೀ ಘಟ್ಟದ ಸಮರದ ಪರಿಚಯವನ್ನು ತಂದುಕೊಂಡು ಯುದ್ಧಕ್ಕೆ ಬರದೆ ಸುಮ್ಮನಿದ್ದನು. ದಯಾಳುವಾದ ರಾಣನು 'ಮಹಬತ್ತ'ನನ್ನು ಸೆರೆಯಿಂದ ಬಿಡಿಸಿ, ಮಾನಸಿಂಹನನ್ನು ರಣರಂಗಕ್ಕೆ ಕಳುಹುವಂತೆ ಹೇಳಿ ಕಳುಹಿಸಿದನು. ಅತ್ಯಲ್ಪ ಕಾಲದಲ್ಲಿಯೇ ಉದಯಪುರವು ರಾಣನ ವಶವಾಯಿತು. ಇನ್ನು ಉಳಿದಿರುವವೆಂದರೆ? ಚಿತ್ತೂರು, ಅಜಮೀರ್, ಮಂಗಳಗಡ ಇವು ಮೂರು.

ಭಾರತೀಯರ ದುರ್ದೈವವು ಇನ್ನೂ ಬಿಟ್ಟಿರಲಿಲ್ಲ. ಇಷ್ಟರಲ್ಲಿಯೇ ರಾಣನ ಶಿಬಿರದಲ್ಲಿ ಕಪ್ಪು ಮೋಡಗಳು ಕೂಡಲಾರಂಭಿಸಿದವು. ಸಮ್ರಾಟನ ಮಗಳಾದ 'ದೌಲತ್ ಉನ್ನೀಸ'ಳನ್ನು ಶಕ್ತಿಸಿಂಹನು ಪ್ರೀತಿಸುತ್ತಿದ್ದನು. ಸಮರವನ್ನು ನೋಡಲು ಬಂದಿದ್ದ ದೌಲತ್ತಗಳಿಗೆ ಪೆಟ್ಟು ಬಿದ್ದು ಆಕೆಯು ಮೃತಳಾದಳು. ಶಕ್ತಿಸಿಂಹನ ಜೀವನ ಸರ್ವಸ್ವವೇ ಹೋದಂತಾಯಿತು. ಕರ್ಮಭ್ರಷ್ಟನಾದವನು ಕ್ಷುಲ್ಲಕವಾದ ಒಬ್ಬ ಮೊಗಲರವಳ ವ್ಯಾಮೋಹಕ್ಕಾಗಿ ದೇಶವನ್ನೂ, ದೇಶಬಂಧುಗಳನ್ನೂ ಧಿಕ್ಕರಿಸಿ ಹೊರಟು ಹೋದನು. ರಾಣನ ಬಲ-ತೋಳು ಮುರಿದಂತಾಯಿತು. ಸುರಾಪಾನಿತನಾದ ರಾಣನ ಕುವರನಾದ ಅಮರಸಿಂಹನು 'ಮೇಹರುನ್ನಿಸಾ' ಎಂಬ ಬಾಲಿಕೆಯ ಮಾನಾಪಹರಣ ಮಾಡಬೇಕೆಂದಿರುವ ವೇಳೆಗೆ ರಾಣನೂ ಮತ್ತು ಲಕ್ಷ್ಮೀ

ದೇವಿಯೂ ಅಲ್ಲಿಗೆ ಬಂದರು. ರಾಣನಿಗೆ ಪರಮಾಗ್ರಹವಾಯಿತು. ಅಮರನ ಶಿರಚ್ಛೇದನ ಮಾಡಲು ಬೀಸಿದ ಕತ್ತಿಯು, ಮಗನನ್ನು ಕಾಪಾಡಲು ತಲೆ ಕೊಟ್ಟ ಸಾಧ್ವೀಮಣಿಯಾದ ಲಕ್ಷ್ಮೀದೇವಿಗೆ ಬಿದ್ದಿತು. ಪತಿಯ ಪಾದಗಳ ಮೇಲೆ ತಲೆಯಿಟ್ಟು, ಮಗನಿಗಾಗಿ ಕ್ಷಮೆಯನ್ನು ಬೇಡಿ ವೀರ ಲಕ್ಷ್ಮೀ ದೇವಿಯು ಪರಲೋಕ ಪ್ರವಾಸಕ್ಕೆ ತೆರಳಿದಳು.

ಈ ಎರಡು ದೃಶ್ಯಗಳು ರಾಣನ ತೋಳುಗಳನ್ನು ಮುರಿದಂತಾದುವು. ರಾಣನಿಗೆ ಮನೋರೋಗವು ವ್ಯಾಪಿಸಿತು. "ಕಡೆಗೂ ಚಿತ್ತೂರನ್ನು ಶತ್ರುಗಳ ಕೈಯಿಂದ ಬಿಡಿಸಲಿಲ್ಲವಲ್ಲಾ" ಎಂಬ ಚಿಂತೆಯು ಕವಿಯಿತು. ಸನ್ನುತ ವೈದ್ಯರೆಲ್ಲರೂ ತಮ್ಮ ವಿಶ್ವಪ್ರಯತ್ನಗಳನ್ನು ಮಾಡಿದರು. ರಾಣನಿಗಾಗಿ ತಮ್ಮ ದೇಹಗಳನ್ನು ಮೃತ್ಯುದೇವಿಗೆ ಬಲಿಕೊಡಲು ಸಿದ್ಧರಾದರು. ತಮ್ಮ ಒಡೆಯನನ್ನುಳಿಸಲು ಬಹು ಕಷ್ಟಪಟ್ಟರು. ಆದರೇನು? ಮಾನವ ಪ್ರಯತ್ನಕ್ಕಿಂತಲೂ ದೈವಪ್ರಯತ್ನವೇ ಹೆಚ್ಚಲ್ಲವೇ ? ಫಲಿತಾಂಶಗಳು ಮಾನವರ ಅಧೀನವೆ?

ಒಂದು ದಿನ ಮೇವಾರಿನ ಸೂರ್ಯನು ತನ್ನ ನಕ್ಷತ್ರಮಂಡಲಕ್ಕೆಲ್ಲಾ ಒಂದು ಸಂದೇಶವನ್ನಿತ್ತು ಪರಲೋಕ ಯಾತ್ರೆಗೆ ತೆರಳಿದನು. ಮೇವಾರಿನ ಆ ದಿವ್ಯ ಜ್ಯೋತಿಯು ಪರದಾಸ್ಯದ ಬಂಧನದಲ್ಲಿ ಸಿಲುಕಿದ ಭಾರತಾಂಬೆಯ ದುಃಖವನ್ನು ಉಪಶಮನ ಮಾಡುವುದಕ್ಕಾಗಿ ತೆರಳಿತು. ಆ ಅಪೂರ್ವ ವ್ಯಕ್ತಿಯ ದಿವ್ಯ ಸಂದೇಶವು ಇಂದಿಗೂ ಪ್ರತಿಯೊಬ್ಬ ಆರ್ಯಾವರ್ತದ ನಿಜ ಪುತ್ರ, ಪುತ್ರಿಯರ ಹೃದಯದಲ್ಲಿಯೂ ಇರತಕ್ಕುದಾಗಿದೆ.

"ನನ್ನ ಜೀವನಯಾತ್ರೆಯ ಕಾರ್ಯವನ್ನು ಸಂಪೂರ್ಣವಾಗಿ ಮಾಡಲಿಲ್ಲವೆಂಬುದೇ ನನ್ನ ದುಃಖ. ಅಯ್ಯೋ! ಮಾತೆಯ ಮಾನವನ್ನು ಕಾಪಾಡಲಾರದಂತಹ ಅಶಕ್ತ ಮಗನನ್ನು, ಹಿಂದು ಬಿಟ್ಟು ಹೋಗುತ್ತೇನಲ್ಲಾ ಎಂಬುದೇ ನನ್ನ ಪರಿತಾಪ. ವೀರಸರದಾರರೇ! ಅಮರನನ್ನು ಹುರಿದುಂಬಿಸಿರಿ. ಮಾತೃಸೇವೆಯ ವಿಶ್ವಾಸವನ್ನು ಅವನಲ್ಲಿ ಉದ್ವೇಗಿಸಿರಿ, ದೇಶಕ್ಕಾಗಿಯೇ ಸಾಯುತ್ತೇವೆಂದು ನಿರ್ಧರ ಮಾಡಿಕೊಳ್ಳಿರಿ. ಸಿಮ್ಮ ನಿಮ್ಮ ವಂಶೀಯರ ಹೃದಯಗಳಲ್ಲಿ ಆರ್ಯಾವರ್ತದ ರಕ್ತವು ಹರಿಯುತ್ತಲಿರುವವರೆಗೆ ತುಚ್ಛನಾದ ಆ ಹೂಣನಿಗೆ ದಾಸರಾಗ

ಬೇಡಿರಿ. ಅಮ್ಮನ ಮಾನದ ಕಡೆಗೆ ಲಕ್ಷ್ಯವಿಡಿರಿ. ಪ್ರಾಣಗಳ ಮೇಲಿನ ಆಶೆಯನ್ನು ತೊರೆಯಿರಿ. ''

* * * * *

೫.

ಯುದ್ಧವು ಮುಗಿಯಿತು. ಮೊಘಲರಿಗೆ ಸಂಪೂರ್ಣ ವಿಜಯವಾಯಿತು. ಮೇವಾಡಿನ ಪತನವು ಪರಮಾವಧಿಯನ್ನು ಕಂಡಿತು. ಪ್ರತಾಪ, ಶಕ್ತ್ರಿ, ಭೀಮ, ಬಲಸಿಂಹರೆಲ್ಲರೂ ಮಡಿದಿದ್ದರು. ಭಾರತ ವರ್ಷವೆಲ್ಲ ತೇಜೋಹೀನವಾಗಿ ಜೀವ ಶವದಂತೆ ಕಾಣುತ್ತಿದ್ದಿತು.

ಈ ವಿಜಯೋತ್ಸವವನ್ನು ನೆರವೇರಿಸಲು ಅಕಬರನು ದೊಡ್ಡ ಹಬ್ಬವನ್ನೇರ್ಪಡಿಸಿದನು. ಮೌಲ್ವಿ, ಮುಲ್ಲಾಗಳಿಗೆ ಯಥೇಚ್ಛವಾಗಿ ದಾನಮಾಡಿದನು. ಹಿಂದೂ ಕವಿಗಳ, ಪುರೋಹಿತರ, ಹೊಗಳಿಕೆಯ ಹಾಡುಗಳಿಗೆ ತಲೆದೂಗಿ ಹಿಡಿ ಹಿಡಿ ಹೊನ್ನನ್ನೆರಚಿಸಿದನು ಪ್ರತಿ ದಿನವೂ ಒಡ್ಡೋಲಗ, ವಿಧವಿಧ ನರ್ತನಗಳು, ಕಣ್ಣಿಗೊಪ್ಪುವ ಸುಂದರಿಯರು, ನಾಲಿಗೆ ಮೆಚ್ಚುವ ಮದ್ಯಗಳು, ಅಲ್ಲದೆ ಸಾಕ್ಷಾತ್ ಸಮ್ರಾಟನೇ ಎಲ್ಲರೊಂದಿಗೂ ಬೆರತು ವಿಜಯೋತ್ಸವದಲ್ಲಿ ಮೈಮರೆತಿದ್ದನು.

ಒಂದು ದಿನ ಒಡ್ಡೋಲಗವು ನಡೆಯುತ್ತಿದ್ದಿತು. ತಾನಸೇನನು ಸಂಗೀತವನ್ನು ಆಲಾಪಿಸುತ್ತಿದ್ದನು. ಅವನ ಕಲಾವೈಖರಿಗೆ ಸಮ್ರಾಟನೇ ಮೊದಲ್ಗೊಂಡು ಭಿಕ್ಷುಕನವರಿಗೆ ಎಲ್ಲರೂ ಮನಸೋತಿದ್ದರು. ಅಂದು ಅವನು ಹಾಡಿದ ಹಾಗೆ ಇನ್ನೆಂದೂ ಹಾಡಿರಲಲ್ಲವೆಂದು ಏಕಕಂಠವಾಗಿ ಎಲ್ಲರೂ ಆಡಿಕೊಳ್ಳುತ್ತಿದ್ದರು. ತಾನಸೇನನು ಹಿಂದೋಲ ಆಲಾಪನೆಯಲ್ಲಿ ಮೈಮರೆತಿದ್ದನು. ಸಮ್ರಾಟನ ಕಂಗಳಿಂದ ಆನಂದಾಶ್ರುಗಳು ಕುಣಿಕುಣಿಯುತ್ತ ಬೀಳುತ್ತಿದ್ದವು. ನಿಶ್ಶಬ್ದತೆಯು ಪ್ರಭೆಯು ಕ್ರಿಮಿಕೀಟಗಳನ್ನೂ ಸುಮ್ಮನಾಗಿಸಿದ್ದಿತು. ಆ ವೇಳೆಗೆ ಎಲ್ಲಿಂದಲೋ ಎದೆಗೆ ಗುರಿಯಿಟ್ಟ ಒಂದು ಬಾಣವು ಸಮ್ರಾಟನ ಬಲ ತೋಳಿಗೆ ಬಲವಾಗಿ ನೆಟ್ಟಿತ್ತು. ಸಭೆಯೆಲ್ಲವೂ ಅಲ್ಲೋಲಕಲ್ಲೋಲವಾಯಿತು. ಸೇನಾದಿ ಸರದಾರರೆಲ್ಲರೂ ಸಮ್ರಾಟನನ್ನು ಸುತ್ತುಗಟ್ಟಿ ನಿಂತರು. ಸಮ್ರಾಟನ ಬಲ ತೋಳಿನಿಂದ ಧಾರೆಧಾರೆಯಾಗಿ ರಕ್ತಪ್ರವಾಹ ಸುರಿಯಲಾರಂಭಿಸಿತು. ಈ ವೇಳೆಗೆ ಸನ್ಯಾಸಿ ವೇಷಧಾರಿಯೊಬ್ಬನನ್ನು ಜನತೆಯು ಎಳತಂದು ಸಮ್ರಾಟನ ಮುಂದೆ ನಿಲ್ಲಿಸಿತು.

. ಸನ್ಯಾಸಿಯ ಸರಳರೂಪು, ಅವನ ಶ್ವೇತ ವರ್ಣದ ದೀರ್ಘ ಕೂರ್ಚ, (Beard) ಶುಭ್ರ ಕಾವಿವರ್ಣದ ಪೋಷಾಕುಗಳು ಎಲ್ಲರಲ್ಲಿಯೂ ಗೌರವವನ್ನು ಹುಟ್ಟಿಸುತ್ತಿದ್ದವು. ಇವನು ಕೊಲೆಗಡಿಗನೇ ಈ ಮಹಾತ್ಮನು ನೀಚ ಹೃದಯದವನೇ. ಅಲ್ಲವೆಂದು ಕೆಲವರೂ "ಹಾಗಾದರೆ, ಸಮ್ರಾಟನ ಕಡೆಗೆ ಬಾಣವನ್ನೇಕೆಸೆದನು." ಎಂದು ಕೆಲವರೂ ಚರ್ಚಿಸಲಾರಂಭಿಸಿದರು.

ಸಮ್ರಾಟನಿಗೆ ಭಗವಾನದಾಸಾದಿಗಳು ಶುಶ್ರೂಷೆ ಮಾಡಿದನಂತರ ಸಮ್ರಾಟನೇ ಆರೋಪಿತನನ್ನು ವಿಚಾರಿಸಲು ಬಯಸಿದನು. ಮತ್ತು ಮೃದುವಾಗಿ ಸನ್ಯಾಸಿಯ ನಡತೆಯ ಅರ್ಥವನ್ನು ಕೇಳಿ, " ಅಯ್ಯಾ ನೀನು ಮಹಾನುಭಾವನಾಗಿ ಕಾಣುವಿ, ಇದೇನು ಈ ಮಹದುತ್ಸವ ಸಮಯದಲ್ಲಿ ನನ್ನ ಜೀವಾಹಪಹರಣ ಪ್ರಯತ್ನ " ಎಂದನು.

ಸನ್ಯಾಸಿಯ ಸಾತ್ವಿಕತೆಯು ಹರಿದು ರಾಜಸಿಕತೆಗೆ ಎಡೆ ಕೊಟ್ಟಿತು. ತನ್ನ ಕೂರ್ಚವನ್ನು ಕಿತ್ತೆಸೆದು, ಕಾವಿಯನ್ನು ಹರಿದೊಗೆದು " ಅಥವಾ, ಕಣ್ಣೆತ್ತಿ ನೋಡು ನಾನು ಯಾರು" ಯೆಂದನು.

ಸಮ್ರಾಟನು ದಿಟ್ಟಿಸಿ ನೋಡಿದನು. " ಪೃಥ್ವಿ—ಪೃಥ್ವಿ."

"ಹೌದು-ಪೃಥ್ವಿಯೇ, ಹೌದು. ನಿನ್ನ ಪ್ರಾಣಾಪಹರಣ, ಅಥವಾ, ಯೋಷಿಯ ಮನವನ್ನು ಬಲವಂತದಿಂದ ಕದಿಯಲೆತ್ನಿಸಿದೆಯಲ್ಲಾ ಅದಕ್ಕೆ ಸೇಡು. ನನ್ನ ಕೈಯಲ್ಲೇ 'ನೀನು ಸಾಯುವೆ' ಎಂದು ಅವಳಿಗೆ ಮಾತು ಕೊಟ್ಟಿದ್ದೆ. ಅದಕ್ಕಿದು ಆಚರಣೆ" ಎಂದನು.

ಸಮ್ರಾಟನು ಕ್ಷಣಕಾಲ ದಿಟ್ಟಿಸಿ ನೋಡಿ " ಕರೆದೊಯ್ಯಿರಿ-ಶೂಲದ ಮರಕ್ಕೆ " ಎಂದನು.

ಪೃಥ್ವಿಯು ಧಿಕ್ಕಾರದಿಂದ ನಕ್ಕು " ಕರೆದೊಯ್ಯುವುದೇನು. ನಡೆಯಿರಿ ನಾನೇ ಬರುವೆ" ಎಂದು ಹೊರಟನು.

ಹೋಗುತ್ತ ಹೋಗುತ್ತ ದಾರಿಯಲ್ಲಿ, ತಲೆಯೆತ್ತಿ ಅದಾಗಲೆ ಅಸ್ತಮಿಸುತ್ತಲಿದ್ದ ಭಾಸ್ಕರನನ್ನು ನೋಡಿ " ನೀಸಿಂದು ಅಸ್ತಮಿಸಿ ನಾಳೆ ಇದೇ, ಇದೇ ಪಾಪಿ ಜಗತ್ತಿನಲ್ಲುದಯಿಸುವೆ. ನಾನು ನಿನಗಿಂತ ಭಾಗ್ಯಶಾಲಿ ಭಾಸ್ಕರಾ-ಇಂದಿಲ್ಲಿ ಅಸ್ತಮಿಸಿ ನಾಳೆ ವೀರ ಸ್ವರ್ಗದಲ್ಲಿ ನನ್ನ ಯೋಷಿಯ ಬಳಿಯಲ್ಲಿ ಉದಯಿಸುವೆ" ಎಂದನು.

---

# ಅವಳ ಬಾಳು

೧.

ಮಾಧುವೊಬ್ಬ ವಿದ್ಯಾರ್ಥಿ. ಬೆಂಗಳೂರಿನಲ್ಲಿ ಬಿ. ಎ. ತರಗತಿಯಲ್ಲಿ ಓದುತ್ತಿದ್ದ. ಜ್ಞಾನಾರ್ಜನೆಗೋಸುಗವೇ ಅವನು ವಿದ್ಯಾಭ್ಯಾಸ ಮಾಡ ಬೇಕಾಗಿತ್ತಲ್ಲದೆ ಉದರಂಭರಣಕ್ಕಲ್ಲ. ಯಾಕಂದರೆ ಅವನ ತಂದೆ ಶಂಕರ ರಾಯರಿಗೆ ಶಿವಗಂಗೆಯ ಬಳಿ ಯಥೇಚ್ಛವಾದ ಕುಷ್ಕಿ ಜಮೀನೂ, ಶ್ರೀರಂಗಪಟ್ಟಣದಲ್ಲಿ ನಾಲೆಯ ಕೆಳಗೆ ೧೫ ಎಕರೆ ತರೀ ಜಮೀನು ಇದ್ದಿತು. ಪಟ್ಟಣದ ಸಮೀಪದಲ್ಲಿಯೇ ಒಂದು ಸಣ್ಣ ತೆಂಗಿನ ತೋಟವೂ ಇದ್ದಿತು. ಶಂಕರರಾಯರು ಸರ್ಕಾರಿ ಪದವಿಯಲ್ಲಿ ಅಮಲ್ದಾರಗಿರಿಯ ವರೆವಿಗೂ ಏರಿ, ಮಾಸಾಶನ ಪಡೆದು ಹಳ್ಳಿಯಲ್ಲೇ ಉಳಿದುಕೊಂಡಿದ್ದರು. ಮೀನಾಕ್ಷಮ್ಮ ನವರು ಶಂಕರರಾಯರಿಗೆ ಅನುರೂಪಳಾದ ಪತ್ನಿ. ಆಕೆಯು ಬಹು ಉತ್ತಮ ಕುಲದಿಂದ ಬಂದವಳು. ಬಡತನದಲ್ಲಿದ್ದಾಗ ಕೊರಗಲಿಲ್ಲ, ಸಿರಿ ಬಂತೆಂದು ಹಿಗ್ಗಲಿಲ್ಲ. ಗಂಡನಿಗೆ ತೋರುತ್ತಿದ್ದ ಭಕ್ತಿಯು ಎಲ್ಲರನ್ನೂ ಮುಗ್ಧರನ್ನಾಗಿ ಸುತ್ತಿದ್ದಿತು. ಬಟ್ಟವಾದ ಮುಖ, ವಿಶಾಲವಾದ ಹಣೆ, ಎಳೆ ನೇಸಾದ ಮೂಗು, ಕಾಂತಿಮಯವಾದ ಕಂಗಳು, ಜತೆಗೆ ಅಡ್ಡವಾಗಿಟ್ಟದ್ದ ಹಣೆಯ ಕುಂಕುಮ, ವಿನಮ್ರತೆಯನ್ನು ತೋರುವ ಕೆಂಪಿನ ಬೆಂಡೋಲೆ, ಮಾದ ರಿಯ ಪುಟ್ಟವಜ್ರದ ಮೂಗು ಬಟ್ಟುಗಳನ್ನು ನೋಡಿದರೆ ಸಾಕ್ಷಾತ್ ಶಂಕರ ವಲ್ಲಭೆಯೇ ಎಂಬಂತಿದ್ದರು. ಎಂತಹ ಸ್ತ್ರೀನಿಂದಕನಾದರೂ ಆಕೆಯನ್ನು ಕಂಡೊಡನೆಯೇ ಭಕ್ತಿ ಪ್ರೇಮಗಳಿಂದ ತಲೆಬಾಗಿಸಿ ಮನಸ್ಸಿನಲ್ಲಿಯೇ ನಮಸ್ಕರಿಸುತ್ತಿದ್ದನು. ಹಳ್ಳಿಗರಿಗೋ ಆಕೆಯನ್ನು ಕಂಡರೆ ಪರಮ ಭಕ್ತಿ ಮಕ್ಕಳು ಖಾಯಿಲೆ ಬಿದ್ದರೆ ಮೀನಾಕ್ಷಮ್ಮನ ಹಸ್ತಸ್ಪರ್ಶವಾಗಬೇಕು. ಮನೆಗೆ ಸೊಸೆ ಬಂದರೆ ಮೀನಾಕ್ಷಮ್ಮ ಹಣೆಗೆ ಕುಂಕುಮವಿಡಬೇಕು. ಗೌಡಿ ತಿಗೆ ಹೊಸ ಬೆಳ್ಳಿಯ ಡಾಬು ಬಂದರೆ ಮೀನಾಕ್ಷಮ್ಮ ಮೊದಲು ನೋಡಿ "ಇಂಥಾದ್ದು ನೂರು ಹಾಕಿಕೊಂಡು ಚೆನ್ನಾಗಿ ಬಾಳು ನನ್ನ ತಾಯಿ" ಎಂದು ಆಶೀರ್ವದಿಸಬೇಕು. ಹೀಗೆ ಹಳ್ಳಿಗರು ಭಾವಿಸುತ್ತಿದ್ದುದೇನೂ ಆಶ್ಚ

ರಿಯಲ್ಲ. ಮೀನಾಕ್ಷಮ್ಮನ ಹೃದಯವೆಂದರೆ ಅಮೃತದ ಕಡಲಿನಂತೆ. ನೊಂದವರ ಹೃದಯಕ್ಕೆ ಆಕೆಯ ಮಾತು, ಕೈತುಂಬಿದ ದಾನಗಳು ಅಮೃತ ಬಿಂದುಗಳು. ಯಾರಿಗೇನು ದುಃಖವಾದರೂ ಮೀನಾಕ್ಷಮ್ಮನ ಬಳಿಯೊಮ್ಮೆ ಹೇಳಿತೆಂದರೆ ದುಃಖವು ದೂರವಾಗುತ್ತಿದ್ದಿತು. ಹೃದಯವು ಹಗುರವಾಗುತ್ತಿದ್ದಿತು. ಎಲ್ಲರ ದುಃಖಕ್ಕೂ ಶಾಂತಿಯನ್ನು ನೀಡುತ್ತಿದ್ದ ಆ ತಾಯಿಯು ತನ್ನ ದುಃಖವನ್ನು ಮಾತ್ರ ಯಾರೊಬ್ಬರಲ್ಲಿಯೂ ಹೇಳಿ ಅವರ ಮನವನ್ನು ನೋಯಿಸಳು.

ಶಂಕರರಾಯ, ಮೀನಾಕ್ಷಮ್ಮನವರ ಕಣ್ಣಿನಬೊಂಬೆಯೆಂದರೆ ಮಾಧು. ಮಕ್ಕಳಾಗಿ ಆಗಿ ಆಗಿ ಹೋಗಿ ಮೀನಾಕ್ಷಮ್ಮನ ಹೃದಯವು ಬೆಂದು ಹೋಗಿದ್ದಿತು. ಕರುಳು ಕರಗಿ ಕರಗಿ ನೀರಾಗಿದ್ದಿತು. ಸತ್ತ ಮಕ್ಕಳನ್ನು ಹಿಡಿದೆತ್ತಿಕೊಂಡು ಮುದ್ದಾಡುತ್ತಾ "ಕಂದಾ, ಈ ಪಾಪಿಯ ಹೊಟ್ಟೆಯಲ್ಲೇಕೆ ಹುಟ್ಟಿದೆ ಚಿನ್ನ, ಯಾರಾದರೂ ಭಾಗ್ಯವಂತರ ಹೊಟ್ಟೆಯಲ್ಲಿ ಹುಟ್ಟಬಾರದಿತ್ತೇ" ಎಂದನ್ನುತ್ತಾ ಕಂಬನಿಗರೆವಳು. ಹೀಗೆ ಜೀವನದಲ್ಲಿ ಎಷ್ಟು ಬಾರಿ ಎಡರುಗಳು ಬಂದರೂ ಒಮ್ಮೆಯೂ ತನ್ನ ಭಗವದ್ಭಕ್ತಿಯು ಅಚ್ಚಳಿಯಲವಕಾಶಕೊಡಳು. "ಇಂತು ನಿರಪರಾಧಿ ಕಂದಗಳನ್ನು ಕೊಲ್ಲುವವನು ದೇವರೇ" ಎಂಬ ಭಾವನೆಯು ಮನಸ್ಸಿಗೆ ತೋರಿದರೂ ಕೂಡಲೆ ಯದನ್ನು ತೊಡೆದುಹಾಕಿ "ಜನ್ಮ ಕೊಟ್ಟವನವನು ನಮ್ಮ ಹಿತಾಹಿತಗಳನ್ನು ಬಲ್ಲನು" ಎಂದು ಸಮಾಧಾನಪಡಿಸಿಕೊಳ್ಳುತ್ತಿದ್ದಳು. ಪತಿಯೊಮ್ಮೆಮ್ಮೆ ಅಧಿಕಾರ ದರ್ಪದಿಂದ ಬಡ ನೌಕರರಿಗೆ ಜಲ್ಮಾನೆ, ಕೆಲಸದಿಂದ ತೆಗೆದು ಹಾಕುವುದು ಇಂತಹ ಶಿಕ್ಷೆಗಳನ್ನು ವಿಧಿಸಿದರೆ ನೌಕರರು ನಮ್ಮೆಡೆಗೆ ಬರುವ ವರೆಗೂ ಬೆಂಕಿಗೆ ಬಿದ್ದ ಪತಂಗದಂತೆ ಅನುಭವಿಸುತ್ತಿದ್ದಳು. ಇತರರ ಸುಖದುಃಖಗಳಲ್ಲಿ ಮೀಳನ ಹೊಂದಿ ತನ್ನ ಸುಖದುಃಖಗಳನ್ನು ಸಂಪೂರ್ಣವಾಗಿ ಮರೆಯುತ್ತಿದ್ದಳು. ಸೀತಾ ಸಾವಿತ್ರಿಯರ ಹಾಡುಗಳನ್ನು ಹೇಳುತ್ತ ಹೇಳುತ್ತ ಕಂಬನಿಗರೆಯುತ್ತಾ "ದೇವರೇ, ನನಗಾಭಾಗ್ಯ ಬರಬಾರದೆ" ಎಂದಂಮುಕೊಳ್ಳುವಳು.

ಮಾಧುವಿನಿಂದ ಕಾಗದ ಬರುವುದು ಒಂದು ದಿನ ತಡವಾದರೆ ಸಾಕು. ಅಂದು ಆಕೆಗೆ ಸಂಪೂರ್ಣ ಉಪವಾಸ ಹಾಗೂ ಜಾಗರಣೆ. ರಾತ್ರಿಯೆಲ್ಲಾ

ಸ್ಮರಣೆ, ಪ್ರಾರ್ಥನೆ, ಮಾಧುವನ್ನು ವೈ ದಡವುತ್ತ ದಡವುತ್ತ ಒಮ್ಮೊ ಮ "ಮಾಧೂ ನೀನು ಅವರ ಹಾಗೆ ಆಗಬೇಕು ನೋಡು—ಅವರ ಶಾಂತಿ ನಿಧಾನ, ಜನಗಳಲ್ಲಿ ವಿಶ್ವಾಸ, ಪರಸ್ತ್ರೀಯರ ವಿಚಾರದಲ್ಲಿರುವ ಗೌರವ ಭಾವಗಳು ನಿನ್ನಲ್ಲಿಯೂ ವರ್ಧಿಸಬೇಕು. ನಿನಗೆ ತಾಯಿಯಂದರೆ ನಾನೊಬ್ಬಳೇ ಅಲ್ಲ--ಈ ಪ್ರಪಂಚದ ಸ್ತ್ರೀಯರೆಲ್ಲಾ ನಿನ್ನ ತಾಯಂದಿರೇ ನೋ ." ಎಂದನ್ನುವಳು. ಶಂಕರರಾಯರು ಹೆಂಡತಿಗೇನಾದರೂ ಸೀರೆ ಕುಪ್ಪಸ, ಒಡವೆವಸ್ತುಗಳ ವಿಚಾರವಾಗಿ ಉಪಚಾರ ಮಾಡಿದರೆ " ನನಗೇಕೆ ಹೇಳಿ ನಾಳೆ ಮಾಧೂ ಹೆಂಡತಿಗೆ ಎಲ್ಲಾ ಆಗಲಿ-ಕಣ್ಣು ತುಂಬ ನೋಡಿ ಸಂತೋಷ ಪಡುತ್ತೇನೆ, ಆ ನನ್ನ ಗೃಹಲಕ್ಷ್ಮೀನ" ಎಂದು ವಿನಯದಿಂದ ನಿರಾಕರಿಸಿ ಬಿಡುವಳು.

ಮಾಧುವೂ ತಾಯಿ ತಂದೆಗಳಿಗೆ ತಕ್ಕಮಗ. ಒಮ್ಮೆಯಾದರೂ ಅವರ ಇಚ್ಛೆಗೆ ವಿರೋಧವಾಗಿ ನಡೆಯನು. ವಿನೋದಕ್ಕಾಗಿ ಕೂಡ ದುಷ್ಕೃತ್ಯಗಳಿಗೆ ಕೈಹಾಕನು. ಸಿಗರೇಟ್ ಸೇದಲು ಯಾರಾದರೂ ಗೆಳೆಯರು ಒತ್ತಾಯಪಡಿಸಿ, ಹಳೆಯಕಾಲದ ಗೊಡ್ಡು ಎಂದು ಪರಿಹಾಸ್ಯ ಮಾಡಿದರೂ ಕೂಡ "ತಾಯಿಯೇನಂದ್ಕೊಳ್ಳುವಳು. ನಾನು ಸಿಗರೇಟು ಸೇದಿದರೆ" ಎಂದು ನೆನೆದು ಆವದ್ಯಾಗಲೆಂಬು ಒಲ್ಲೆನೆನ್ನುವನು. ಅನೇಕ ವಿಚಾರಗಳಲ್ಲಿ ತಂದೆಗಿಂತಲೂ ತಾಯಿಯನ್ನೇ ಮಾಧುವು ಹೆಚ್ಚು ಹೋಲುತ್ತಿದ್ದನು. ತಂದೆಯ "ಅಸಿಸ್ಟೆಂಟ್ ಕಮೀಷನರ್" ಆದರ್ಶಕ್ಕಿಂತಲೂ ತಾಯಿಯ " ಬಡವರ ಬಂಧು" ಆದರ್ಶವೇ ಅವನ ಮನಸ್ಸಿಗೆ ಹೆಚ್ಚು ಒಪ್ಪುತ್ತಿದ್ದಿತು.

ಮಾಧುವು ಬೆಂಗಳೂರು ಸೇರಿ ಸುಮಾರು ಎರಡು ವರ್ಷಗಳ ಮೇಲಾಗಿದ್ದಿತು. ಬಸವನಗುಡಿಯಲ್ಲಿನ ಒಂದು ಬಂಗಲೆಯ ಉಪಮನೆ (Out-House)ಯ ಒಂದು ಕೋಣೆಯಲ್ಲಿ ವಾಸಿಸುತ್ತಿದ್ದನು. ವ್ಯಾಸಂಗಕ್ಕನುಕೂಲವಾಗಿ ಪ್ರದೇಶವು ಆವರಣ ಗೋಡೆಯಿಂದಲೂ, ಮುದ್ದಾದ ಉಪವನದಿಂದಲೂ ಅಲಂಕೃತವಾಗಿದ್ದುದರಿಂದ, ಹೊಟೇಲಿನ ಗಡಿಬಿಡಿಯ ವಾಸಕ್ಕಿಂತಲೂ ಇದೇ ಉತ್ತಮವೆಂದಿದ್ದನು. ಬಂಗಲೆಯು ಯಾರೋ ದೊಡ್ಡ ಮನುಷ್ಯರಿಗೆ ಬಾಡಿಗೆಗೆ ಕೊಡಲ್ಪಟ್ಟಿದ್ದಿತು. ಸೇವಕರೂ, ಮೋಟಾರು ಈ ಆಡಂಬರಗಳನ್ನು ಮಾತ್ರ ಕಂಡಿದ್ದನೇ ವಿನಾ ' ಆ ದೊಡ್ಡ ಮನುಷ್ಯರು

ಯಾರು ಎಂದು ವಿಚಾರಿಸುವ ಗೋಜಿಗೆ ಮಾಧುವು ಎಂದೂ ಹೋಗಿರಲಿಲ್ಲ. ಇದು ಮಾಧುವಿನ ಸ್ನೇಹಿತರಿಗೆ ಬಹುನಗೆಯನ್ನು ಉಂಟುಮಾಡಿದ್ದಿತು. ಇತರರ ನಡೆನುಡಿ ನೀತಿಗಳಿಗೆ ವೃಥಾಮುನಗೊಡುವುದೂ, ಅವರ ಬಗ್ಗೆ ವ್ಯರ್ಥ ಟೀಕೆಮಾಡಿ ಕಲಹಮಾಡುವುದೂ ಮಾಧುವಿಗೆ ಸೇರದ ವಿಷಯಗಳು. ಹೀಗಾಗಿ ಮಾಧುವಿನ ಬಳಿ ಕೆಚ್ಚು ಮಂದಿ ಸುಳಿಯುತ್ತಲೇ ಇರಲಿಲ್ಲ. ಅದ ರವನ ಅದೃಷ್ಟ. ಇದ್ದ ಒಬ್ಬಿಬ್ಬರು ಸ್ನೇಹಿತರು ಚಿನ್ನದಂತಹವರು-ಪ್ರಾಣಕ್ಕೆ ಪ್ರಾಣ ಕೊಡಲು ಹಿಂಜರಿಯದವರು.

೨.

ಒಂದು ಕೃಷ್ಣಪಕ್ಷದ ರಾತ್ರಿ. ಕತ್ತಲೆಯೂ ಎಲ್ಲೆಲ್ಲಿಯೂ ಆವರಿಸಿದ್ದಿತು. ಅಲ್ಲಿ ಈಲ್ಲಿ ಮಿನುಗುತ್ತಿದ್ದ ವಿದ್ಯುದ್ದೀಪಗಳು ತಮ್ಮ ಶಕ್ತಿಹೀನತೆಯನ್ನು ಕಂಡು ನಾಚುತ್ತಿದ್ದವು. ಎಲ್ಲೆಲ್ಲಿಯೂ ನೀರವ. ಕ್ರಿಮಿಕೀಟಗಳೂ ಕೂಡ ಆ ಗಾಢ ಕತ್ತಲೆಗೆ ಬೆದರಿ ಗಟ್ಟಿಯಾಗಿ ಚಿಲಿಪಿಲಿ-ನಾದಮಾಡದೆ ಒಳಗೊಳಗೆ ಪಿಸುಗುಟ್ಟಿಕೊಳ್ಳುತ್ತಿದ್ದವು. ಒಂದೊಂದು ಸಲ ನಾಯಿಯೊಂದು ಭಯಂಕರ ವಾಗಿ ಬೀರಿಕೊಳ್ಳುತ್ತಿದ್ದಿತು. ಆಕಾಶದಲ್ಲಿನ ನಕ್ಷತ್ರಗಳು ಕೂಡ ಆ ಗಾಢ ತೆಗೆ ಬೆದರಿ ಮಿಣಿಮಿಣಿಕೆಂದು ಕಣ್ಣು ತೆರೆದು ಮುಚ್ಚುತ್ತಿದ್ದವು. ಮೆಲ್ಲ ಮೆಲ್ಲನೆ ಮಳೆಯ ಹನಿಗಳು. ತಣ್ಣನೆಯ ಗಾಳಿ ಇವೆಲ್ಲವೂ ಕತ್ತಲೆಯ ಆಧಿ ಪತ್ಯಕ್ಕೆ ತಕ್ಕ ಘನತೆಯನ್ನು ಕೊಟ್ಟಿದ್ದವು.

ಆ ರಾತ್ರಿ ಮಾಧುವು ಮಹಮದೀಯರ ದಿವ್ಯಗ್ರಂಥವಾದ ಕೊರಾನಿನ ಭಾಷಾಂತರವನ್ನು ಓದುತ್ತಾ "ಸ್ವರ್ಗವು ಸ್ತ್ರೀಯರ ಪದತಲದಲ್ಲಿದೆ" ಎಂಬ ಪಂಕ್ತಿಯನ್ನು ಕಂಡು ಅದನ್ನೇ ಚಿಂತಿಸುತ್ತ ಬಹುಕಾಲ ಕುಳಿತಿದ್ದನು. ಮೈಯ್ಯಮೇಲಿನ ಪ್ರಜ್ಞೆಯೇ ಮರೆತು ಹೋಗಿದ್ದಿತು. ಹೀಗೆಷ್ಟು ಹೊತ್ತು ಕುಳಿತಿದ್ದನೋ ಗೊತ್ತಿಲ್ಲ; ಸುಮಾರು ಒಂದು ಘಂಟೆಯ ವೇಳೆಗೆ ಗಡಿಯಾ ರದ ಎಚ್ಚರಗಂಟೆ (Alarm) ಬಡಿದುಕೊಳ್ಳಲು ಕುಳಿತಿದ್ದವನು ಭ್ರಾಂತಿ ಯಿಂದೆದ್ದು ಗಂಟೆಯನ್ನು ನಿಲ್ಲಿಸಿ ಹೊರಬಂದು ಸ್ವಲ್ಪ ಹೊತ್ತು ಅತ್ತಿತ್ತ ಮೆಲ್ಲನೆ ತಿರುಗಾಡಿದನು. ಇದ್ದಕ್ಕಿದ್ದಂತೆ ಬಂಗಲೆಯ ಬಾಗಿಲು ತೆರೆಯ ಲ್ಪಟ್ಟು ಇಬ್ಬರು ಹೊರಗೆ ಬಂದರು. ಅವರಲ್ಲಿಯೊಬ್ಬನು ಪುರುಷನೆಂದು ಭಾಸವಾಯಿತು. ಆವನು ಬಂಗಲೆಯೊಂದು ಕಡೆ, ಯಾರನ್ನೊ ಹುಡುಕು

ವಂತೆ ಹುಡುಕಿ, ಮತ್ತೊಂದು ವ್ಯಕ್ತಿ, (ಸ್ತ್ರೀಯಂತೆ ಕಂಡು ಬಂದಿತು.) ಇದ್ದೆಡೆಗೆ ಹೋಗಿ ಏನನ್ನೊ ಮೆಲ್ಲಗೆ ಪಿಸುಗುಟ್ಟಿದನು. ಸ್ತ್ರೀ ವ್ಯಕ್ತಿಯು ಹೊರಬಂದು, ಹಾಗೆಯೇ ಸ್ವಲ್ಪಹೊತ್ತು ಹುಡುಕಿ ಪುರುಷನಿದ್ದೆಡೆಗೆ ಹೋಗಿ ಏನನ್ನೋ ಪಿಸುಗುಟ್ಟಿತು. ಇಬ್ಬರೂ ಒಳಗೆ ಹೋದರು. ಬಾಗಿಲು ಹಾಕಲ್ಪಟ್ಟಿತು. ಮಾಧವನಿಗೆ ಎದೆಯು ಝಲ್ಲೆಂದಿತು. ಸಂಶಯವು ಮನದಲ್ಲಿ ಊರಿತು. ಮುಂದೇನಾಗುತ್ತದೆಂಬುದನ್ನು ನೋಡಲು ಸಮೀಪದಲ್ಲಿದ್ದ ಮರವನ್ನೊರಗಿ ನಿಂತನು. ಸ್ವಲ್ಪಕಾಲಾನಂತರ ಪುನಃ ಬಾಗಿಲು ತೆರೆಯಲ್ಪಟ್ಟು ಸ್ತ್ರೀವ್ಯಕ್ತಿಯೊಂದೇ ಹೊರಬಿದ್ದಿತು. ಅದೇ ಬಾಗಿಲು ಹಾಕಿಕೊಂಡು ಅವಸರವಸರದಿಂದ ಹೊರಬಾಗಿಲಿನ ಸುತ್ತಲೂ ನೋಡಲಾರಂಭಿಸಿತು. ಪುನಃ ಮನೆಯ ಒಳಗೆ ಹೋಯಿತು. ಅಂತೂ, ಚರ್ಯೆಯಿಂದ ವ್ಯಕ್ತಿಯ ಮನಸ್ಸು ಯಾವದೋ ಕಾರಣಕ್ಕೆ ತಳಮಳ ಗೊಳ್ಳುತ್ತಿದ್ದಿತೆಂದು ಮಾಧವನಿಗೆ ಭಾಸವಾಯಿತು "ವಿಚಾರಿಸಿ ನೋಡುವ" ಎಂಬ ಕುತೂಹಲವೊಂದು ಕಡೆ "ಯಾರೋ, ಏನೋ, ಮನೆಯ ಹೆಂಗಸೇ ಆಗಿರಬಹುದು" ಎಂಬ ಸಂದೇಹವೊಂದು ಕಡೆ "ಮನೆಯ ಹೆಂಗಸಾದರೆ ಈ ವಿಪರೀತ ವರ್ತನವೇಕೆ. ಈ ಅವೇಳೆಯಲ್ಲಿ ಯಾರಿಗೆ ಕಾಯುವುದು" ಎಂಬ ಸಂಶಯ ಮತ್ತೊಂದು ಕಡೆ ಹೀಗೆ ತನ್ನೊಳಗೇ ಅಳೆದು ಸುರಿಯಲಾರಂಭಿಸಿದನು. ಎಷ್ಟು ಹೊತ್ತಾದರೂ ಬಗೆಹರಿಯಲಿಲ್ಲ. ಧೈರ್ಯಮಾಡಿ "ವಿಚಾರಿಸಿಯೇ ಬಿಡುವ" ಎಂದು ಮುಂದುವರಿದನು. ಮನಸ್ಸು ಹಿಂದೆಗೆಯಿತು. ಯಾವಳೋ "ವೇಶ್ಯೆಯಿರಬಹುದು. ನಾನು ತರುಣ, ಇದು ಅವೇಳೆ. ನನಗೇ ತಕ್ಕೆ ಚಿಂತೆ" ಎಂದು ತನ್ನ ಕಿರುಮನೆಯ ಕಡೆಗೆ ಹೆಜ್ಜೆಯಿಟ್ಟನು. ಪುನಃ ಮನಸ್ಸು "ಹೆಂಗಸೊಬ್ಬಳು, ಇದು ಅವೇಳೆ" ಎಂದು ಎಚ್ಚರಿಸಿತು. ನಿಂತಲ್ಲಿಯೇ ನಿಂತನು. ಏನು ಮಾಡಲಿಕ್ಕೂ ತೋಚದೆ ಹೋಯಿತು. ತಕ್ಷಣವೇ ಆ ನೀರವತೆಯಲ್ಲಿ ತಾಯಿಯ ಜ್ಞಾಪಕಬಂದಿತು. "ಮನಸ್ಸೊಂದು ಚೆನ್ನಾಗಿದ್ದರೆ, ಯಾವ ಕೆಲಸಕ್ಕೂ ಹೆದರಬೇಡ ಮಾಧೂ" ಎಂದಾಕೆ ಅಂದಂಥಾ ಮಾತುಗಳು ಈಗ ಹೇಳಿದಹಾಗಾಯಿತು. ಮಾಧುವಿನಲ್ಲಿ ಹೊಸ ಶಕ್ತಿ ಹುಟ್ಟಿತು. ಆಗಂತುಕಳಿದ್ದಲ್ಲಿಗೆ ಹೋಗಿ ನಿಂತ. ಆಕೆಯು ಭಯಗ್ರಸ್ತಳಾಗಿ "ಯಾಕೆ ಇಷ್ಟು ಹೊತ್ತು" ಎಂದಳು.

"ನನ್ನನ್ನು ಯಾರೆಂದು ಭಾವಿಸಿದೆ ತಾಯಿ."

ಆಗಂತುಕಳು ಬೆದರಿದಳು. ಕಣ್ಣುಗಳಲ್ಲಿ ನೀರು ತುಂಬಿತು. ನಿರುತ್ತರಳಾದಳು.

"ನೀನು ಯಾರು ತಾಯಿ—ಈ ಹೊತ್ತಿನಲ್ಲಿ ಒಳಗಿನಿಂದ ಹೊರಗೇಕೆ ಬಂದೆ—ಯಾರಿಗಾಗಿ ಕಾಯುತ್ತಿರುವೆ ?"

ಆಗಂತುಕಳು ಮಾತನಾಡಲೇ ಇಲ್ಲ. ಮಾಧುವಿನ ಸಂಶಯ ಹೆಚ್ಚಿತು

"ಹಾಗಾದರೆ ಬಾಗಲು ತೆಗೆಯಿಸಲೇ, ಹನಿಯು ಹೆಚ್ಚುತ್ತಿದೆ. ನೀನಿನ್ನೂ ಚಿಕ್ಕವಳೆಂದು ತೋರುತ್ತದೆ —ಇಲ್ಲಿ ನಿಂತಿರುವುದು ಸರಿಯಲ್ಲ." ಆಗಂತುಕಳಿಗೆ ಜ್ಞಾನೋದಯವಾಯಿತು

"ಬೇಡಿ ಬಾಗಿಲು ತೆಗೆಯಿಸಬೇಡಿ-ನಾನು........"

"ಹೇಳು ತಾಯಿ ಭಯಪಡಬೇಡ-ನಾನು ಯಾರೆಂದು ಅರಿಯುವಿ. ನೀನು ಯಾರೇ ಆಗು ನಿನ್ನಲ್ಲಿ ಗೌರವ ಭಕ್ತಿ ನನಗುಂಟು. ಹೇಳು ನಿರ್ಭೀತಿಯಿಂದ ಹೇಳು."

"ಹಾಗಾದರೆ ನೀವಿರುವುದೆಲ್ಲಿ"

"ಇಲ್ಲಿಯೇ ಉಪಮನೆಯ ಒಂದು ಕೋಣೆಯಲ್ಲಿ."

"ನಡೆಯಿರಿ—ಅಲ್ಲಿಗೇ ಬರುವೆ'

ಇಬ್ಬರೂ ಕೋಣೆಗೆ ಬಂದರು. ಆಗಂತುಕಳು ಕೋಣೆಯ ಭವ್ಯವಾತಾವರಣವನ್ನು ನೋಡಿ ಚಕಿತಳಾದಳು. ಮಾಧುವು ಆಗಂತುಕಳನ್ನು ನೋಡಿ ಚಮತ್ಕಿತನಾದನು. ಸುಂದರವಾದ ವದನ, ರಮ್ಯವಾದ ಕಾಂತಿ, ಮಲ್ಲಿಗೆಯಂತಹ ದಂತ ಶ್ರೇಣಿ, ತಾರುಬಿಗೆ ಮುಡಿಸಿದ ಹೂವಿನಂತಿದ್ದ ತುಟಿಗಳು. ಸೌಂದರ್ಯವನ್ನು ಹೊರ ಚಲ್ಲುತ್ತಿದ್ದ ಕಿರಿವಯಸ್ಸು—೧೮-೨೦ಕ್ಕೆ ಮೀರಿರಲಾರದು. ಆ ಸೌಂದರ್ಯ ಸುಧೆಯನ್ನು ಸವಿಯುತ್ತ ಮಾಧವನಿಗೆ "ಛೆ !" ಎಂದೆನಿಸಿತು. "ಯಾವ ಮನೆಯ ಮಂಗಳ ಮೂರುತಿಯೋ ಇದು. ಯಾವ ಭಾಗ್ಯವಂತನ ಹೃದಯ ಕಮಲವೋ ಇದು. ನಾನೆಂತಹ ನೀಚ, ನನ್ನದಲ್ಲದ ವಸ್ತುವನ್ನು ಭೋಗಿಸುತ್ತಿರುವೆನು" ಎಂದಂದುಕೊಂಡು ದೃಷ್ಟಿಯನ್ನು ವದವದಿಂದ ಪಾದಕ್ಕಿಳಿಸಿದನು. ಅಲ್ಲಿಯೂ ಅದೇ ಸೌಂದರ್ಯ—ಅದೇ ಕಾಂತಿ "ಜಗತ್ತಿನ ಜೀವ ಜೀವಾಳವೇ ನಾರಿಯರ ಚರಣತಲದ

K 657

ಲ್ಲಿದೆ" ಎಂದಂದ ಮಹಾ ಪುರುಷನ ವಚನವು ಜ್ಞಾಪಕಕ್ಕೆ ಬಂದಿತು. ಆ ಬೆಳ್ಳಿಯ ಕಾಲಂದುಗೆಯನ್ನು ಕಂಡು ತನ್ನ ತಾಯಿಯನ್ನು ನೆನೆದನು 'ಅಮ್ಮಾ, ಇದು ನನ್ನ ವಿಷಮ ಸಮಯ. ಹೃದಯವನ್ನು ಪವಿತ್ರವಾಗಿರಿಸು" ಎಂದು ದೈನ್ಯದಿಂದ ಬೇಡಿಕೊಂಡನು. ನೀರವತೆಯು ವಿವಿಧ ಭಾವನೆಗಳಿಗೆ ಜನ್ಮ ಕೊಡುವುದೆಂಬುದನ್ನನುಭವಿಸಿ.

"ಅಮ್ಮಾ, ನೀನಾರು. ಏನೇ ಇರಲಿ ನಿಸ್ಸಂಕೋಚವಾಗಿ ಹೇಳು. ನಿನ್ನ ಹಿತಚಿಂತಕರಲ್ಲಿ ನಾನೂ ಒಬ್ಬನೆಂದು ಭಾವಿಸಿಕೋ."

"ನಾನು-ಯಾರೆಂದು ಹೇಳಲಿ-ಯಾತಕ್ಕೆ ಬಂದೆನೆಂದು ಹೇಳಲಿ"- ಗಂಟಲುಬ್ಬಿ ಬಂದಿತು-ಕಣ್ಣುಗಳಲ್ಲಿ ನೀರು ತುಂಬಿಬಂದಿತು

"ದುಃಖವೇತಕ್ಕೆ ? ನಿನಗಾದ ಅನ್ಯಾಯವೇನು-ಹೇಳಲಿಚ್ಛೆಯಿಲ್ಲವೊ ? ಬೇಡ—ಆದರೆ ದುಃಖಿಸಬೇಡ—ಇರುವ ಸ್ಥಳಹೇಳು ಕರೆದೊಯ್ದು ಬಿಟ್ಟು ಬರುವೆನು."

ಮಾಧವನ ದೈನ್ಯತೆಯೂ ಕರುಣಾರ್ದ್ರತೆಯೂ, ಅವನ ಕಿರುಮನೆಯಲ್ಲಿದ್ದ ಭವ್ಯಭಾವೋದ್ದೀಪಕ ಚಿತ್ರಗಳೂ ಆಗಂತುಕಳ ಮನಸ್ಸಿನ ಭಾವವನ್ನು ಬದಲಾಯಿಸಿದುವು.

"ನನ್ನ ಹೆಸರು ಕಮಲಾ, ನಾನಿರುವುದು ಪಕ್ಕದ ಬೀದಿಯಲ್ಲಿ."

"ಹಾಗಾದರೆ ಇಲ್ಲಿ ಈ ವೇಳೆಗೆ ಬರಲು ಕಾರಣ..."

"ಕಾರಣ, ಪತಿಸೇವೆ...."

"ನಿನ್ನ ಪತಿಯು ಇಲ್ಲಿರುವನೇ-ಈವೇಳೆಯಲ್ಲೇಕೆ ಹೊರಬಂದೆ ?"

"ಅಯ್ಯೋ ! ಹೇಳಲಾರೆ ಹೇಳದಿರಲಾರೆ-ನೀವೇ ಅರಿಯಲಾರಿರಾ !"

"ಇಲ್ಲ ತಾಯಿ, ನಾನು ಕೇವಲ ವಿದ್ಯಾರ್ಥಿ. ಏನನ್ನೂ ಕಾಣೆ. ಎಲ್ಲವನ್ನೂ ನೀನೇ ತಿಳಿಸು. ನಿನ್ನ ಪತಿಯಾರು ?"

"ಅವರೊಬ್ಬರು. ಒಂದು ಕಛೇರಿಯ ಗುಮಾಸ್ತರು........"

"ಹಾಗಾದರೆ-ನೀನಿಲ್ಲಿಗೆ ಬಂದುದು ?"

"ಅವರಿಗೆ...ಸಂಬಳ....ಹೆಚ್ಚಾಗಲೆಂದು ....ಗ್ರೇಡುಬರಲೆಂದು !!"

ಮಾಧವನ ಕಣ್ಣುಗಳಿಂದ ಧಾರೆಧಾರೆಯಾಗಿ ದುಃಖಾಶ್ರುಗಳು ದುರಿದವು. ಮೇಜನ ಮೇಲಿದ್ದ ಲೋಟದ ನೀರನ್ನು ಒಂದೇ ಬಾರಿಗೆ ಕುಡಿ

ದನು. ಮುಖದ ಮೇಲೆ ಹರಿಯುತ್ತಿದ್ದ ಬೆವರು!ನೀರನ್ನು ಒರಸಿಕೊಂಡನು. ದೇಹಾದ್ಯಂತವೂ ಉರಿಯಿಂದ ಕಾವೆದ್ದಂತಾಯಿತು. ರಟ್ಟೊಂದರಿಂದ ಬೀಸಿಕೊಂಡು, ಪುನಃ ನೀರು ಕುಡಿದನು. ಪ್ರಯತ್ನ ಪೂರ್ವಕವಾಗಿ ಕಣ್ಣೀರು ಕಾಲುವೆಗೆ ಅಣೆಕಟ್ಟನ್ನು ಹಾಕಲೆತ್ನಿಸಿದನು, ಸಾಧ್ಯವಾಗಲಿಲ್ಲ. "ಹೆಂಗಸಿನೆದುರಿಗೆ ಅಳುವುದೇ" ಎಂದಂದುಕೊಂಡು ತನ್ನನ್ನೇ ತಾನು ನಿಂದಿಸಿಕೊಳ್ಳುವನು—ಎಲ್ಲವೂ ನಿರರ್ಥಕ. "ಯಾರಿಗಾಗಿಯೋ ನಾನೇತಕ್ಕೆ ಚಿಂತಿಸಬೇಕು. ನನಗಾದ ನಷ್ಟವೇನು" ಎಂದು ಅಸ್ತವ್ಯಸ್ತವಾದ ಹೃದಯಕ್ಕೆ ಉಪದೇಶಿಸಲು ತ್ವರೆಗೊಂಡನು "ಧಿಕ್" ಎಂದಿತದು. ಹೇಗೋ ಧೈರ್ಯಮಾಡಿ.

"ಚಿಂತೆಯಿಲ್ಲವಮ್ಮಾ—ಕಮಲಾ–ತಂಗೀ—"

ಮುಂದೆ ಏನೋ ಹೇಳಬೇಕೆಂದಿದ್ದ ಗಂಟಲುಕಟ್ಟಿ ಬಂದು ಮಾತೇ ನಿಂತು ಹೋಯಿತು.

ಕಮಲೆಯೂ ಕಂಬನಿಗರೆಯುತ್ತಲೇ ಇದ್ದಳು. "ತಂಗೀ" ಎಂದೊಡನೆಯೇ ರೋಮಾಂಚನೆಯನ್ನು ಪಡೆದು ಎದ್ದು ನಿಂತಳು ಮಾಧುವಿನ ಕೈಹಿಡಿದು.

"ಅಣ್ಣಾ—ನೀನು ಯಾವ ಜನ್ಮದ ಬಂಧು" ಎಂದಳು.

"ಕಮಲಾ, ಇದು ಹೊತ್ತಲ್ಲ—ಮತ್ತೆ ಯಾವಾಗಲಾದರೂ ಸಿಕ್ಕುವಿಯಾ—ಎಲ್ಲವನ್ನೂ ಮಾತನಾಡುವ."

"ಆಗಲಿ, ನಾಳೆಯ ಮಧ್ಯಾಹ್ನ—ನಮ್ಮ ಮನೆಗೆ........"

"ನಮ್ಮ ಮನೆಗೆ—" ಬಾರಿ ಬಾರಿಗೆ ತಾನೇ ಉಚ್ಚರಿಸಿಕೊಂಡನು "ನಮ್ಮ" ಆಹಾ! "ನಮ್ಮ..........."

ಕಮಲೆಯೆದ್ದಳು, ಮಾಧುವೂ ಎದ್ದನು. ಕೋಣೆಯ ದೀಪವನ್ನಾರಿಸಿ ಅವಳೊಂದಿಗೆ ಹೊರಟನು. ಪಕ್ಕದ ಬೀದಿಯ ಒಂದು ಮನೆಗೆ ಬರುವವರೆಗೂ ಯಾರೂ ಮಾತನಾಡಲಿಲ್ಲ. ಕಮಲೆಯು ಕುಪ್ಪಸದ ಕಿಸೆಯಿಂದ ಬೀಗದಕೈಯೊಂದನ್ನು ತೆಗೆದಳು.

"ನಿಮ್ಮ ವಿಳಾಸವೇನು?"

"ಮಾಧವ—ಸೂರ್ಯಾಶ್ರಮ. ಬಸವನಗುಡಿ."

“ ನಾಳೆ ಬರುವಿರಾ ?”

“ ಬಾರೆಂದರೆ ಬರುವೆನು.”

“ ದಯಮಾಡಿ ಬನ್ನಿ.”

“ ಇನ್ನು ನಾನು ಹೊರಡಲೇ.”

“ ಹೊರಡುವಿರಾ... ....”

“ ಹೊರಡಲೇ ಬೇಕು—ನಾಳೆ ಬರುವೆನು.”

“ ಚಿತ್ತ ” ಎಂದಳು.

ಮಾಧುವು ಹೊರಟನು. ದುಃಖಪರಿಪೂರ್ಣತೆಯಿಂದ ದೇಹವು ಬಹು ಭಾರವಾಗಿತ್ತು. ಕಾಲೆಳೆದುಕೊಂಡು ಮನೆಗೆ ಬಂದು ಸೇರಿದನು. ಮೂರು ಘಂಟೆ ಹೊಡೆಯಿತು ಪ್ರಪಂಚದಲ್ಲಿ ಏನಾದರೇನು ಕಾಲನೇನೋ ತನ್ನ ಕೆಲಸವನ್ನು ತಾನು ಕ್ರಮವಾಗಿ ಮಾಡುತ್ತಲೇ ಇರುತ್ತಾನೆ ಎಂದಂದು ಕೊಳ್ಳುತ್ತಾ ಹೋಗಿ ಮಲಗಿಕೊಂಡನು.

ಎಷ್ಟು ಹೊತ್ತಾದರೂ ನಿದ್ರೆಯೇ ಬಾರದು. ಚಿಂತೆಯನ್ನು ಮನಸ್ಸಿನಿಂದ ಹೊರದೂಡಬೇಕೆಂದೆತ್ನಿಸಿದನು. ಸಾಧ್ಯವಾಗಲಿಲ್ಲ. ಎದ್ದು ಕುಳಿತು “ ಭಗವದ್ಗೀತೆ ” ಯನ್ನು ತೆರೆದು ಓದಲಾರಂಭಿಸಿದನು. ಅಕ್ಷರಗಳ ಪಠನವಾಯಿತೇ ವಿನಾ ಮನಸ್ಸಿಗೊಂದೂ ಹತ್ತಲಿಲ್ಲ. ಸ್ವಲ್ಪ ಹೊತ್ತಿಗೆ ಮುಂಚೆ ನಡೆದಿದ್ದ ದೃಶ್ಯವೇ ಪುನಃ ಪುನಃ ಎದುರಿಗೆ ಬಂದು ನಿಲ್ಲುತ್ತಿದ್ದಿತು. ಗೀತೆಯನ್ನು ಬಿಸುಡಿ, ಎದ್ದು ತಾಯಿಯ ಭಾವಚಿತ್ರವನ್ನು ದಿಟ್ಟಿಸಿ ನೋಡಿದನು. ಆ ಮುಗುಳ್ನಗೆ!! ಶಾಂತಿಯ ಪವಿತ್ರಗಾಳಿಯು ಬೀಸಿತು. ಪಟವನ್ನೆತ್ತಿ ಹಿಡಿದು, ಅಪ್ಪಿ ಚುಂಬಿಸಿದನು. “ ಅಮ್ಮಾ, ನೀನೆಲ್ಲಿರುವೆ—ಬೇಗ ಬಾ—ನನಗೊಂದು ಜೋಗುಳ ಹೇಳು ” ಎಂದನ್ನುತ್ತಾ ಮಲಗಿದನು. ಸುಖವಾದ ನಿದ್ರೆ ಹತ್ತಿತು.

೩

ಕಮಲೆಯ ಮುಖವಲ್ಲಂದು ಕಳೆಯಿರಲಿಲ್ಲ. ಆ ಗುಂಗುರು ಮುಂಗುರಳನ್ನು ಸರಿಮಾಡಿಕೊಳ್ಳುತ್ತಾ ಓರೆನೋಟದ ಬಿನ್ನಾಣದಿಂದ “ ಚೆನ್ನಾಗಿದ್ದೀರಾ ” ಎನ್ನುವ ಹಸನ್ಮುಖವಿದ್ದಿಲ್ಲ. ಬಾಯಿತುಂಬ ಎಲೆಡಿಕೆಯನ್ನು ಸವಿದು ಅಮೃತಬಿಂದುವಿನಂತೆ ಅಧರದಂಚಿನಲ್ಲಿ ಹರಿಯುತ್ತಿದ್ದ ಕೆಂಪು

ಹನಿಯನ್ನು ಒರಸಿಕೊಳ್ಳುತ್ತಾ, ಯಾರಾದರೂ ಕಂಡರೆ ನೀರಿಗೆ ನಸು ನಗುತ್ತಾ ಕೈನೀಡುವ ತುಂಟತನವಿರಲಿಲ್ಲ. ಎದ್ದೊಡನೆಯೇ ತಲೆಬಾಚಿ ಕೊಂಡು, ಯೌವನತೆಯ ಭಾರದಿಂದ ಜಗ್ಗುತ್ತಿದ್ದ ದೇಹವನ್ನು ಹಿಡಿದೆತ್ತಿ ದಂತೆ ಬಿಗುವಾದ ಕುಪ್ಪಸವನ್ನು ತೊಡಿಸಿ, ಕುಪ್ಪಸದ ಬಣ್ಣಕ್ಕೊಪ್ಪುವ ಸೀರೆಯುನ್ನುಟ್ಟು ನಿಲುಗನ್ನಡಿಯಲ್ಲಿ ತನ್ನ ರೂಹನ್ನೇ ನೋಡಿ ಹಿಗ್ಗಿಕೊಂಡು ಸಂಪೂರ್ಣ ಆತ್ಮನಂಬಿಕೆಯಿಂದ ಒಂದು ತೆರನ ಧೀಮಂತ್ರಭಾವದಲ್ಲಿ ಕೈಯಾ ಡಿಸುವ ಲವಲವಿಕೆಯಿದ್ದಿಲ್ಲ. ಕಣ್ಣುಗಳೆರಡೂ ಕೆಂಪಗೆ ಕೆಂಡದಂತೆ ಕಾದು ರಕ್ತವನ್ನು ಸುರಿಸುತ್ತಿದ್ದಂತಿದ್ದವು. ಮುಖ ಕಮಲವು ಬಾಡಿತ್ತು. ರಾಶಿ ರಾಶಿಯಾದ ಕೇಶವು ಧಿಕ್ಕಾರತನದ ಹೊಡೆತಕ್ಕೆ ಸಿಲುಕಿ ಜೀವ ಹಾರಿದ ಹಕ್ಕಿಯಂತೆ ಬೆನ್ನಿನ ಮೇಲೆ ಬಿದ್ದಿತ್ತು. ಯಾವದೋ ಒಂದು ಚಿಂತೆಯು ಕಮಲೆಯನ್ನು ಸಂಪೂರ್ಣವಾಗಿ ಆವರಿಸಿದ್ದಿತು. ಯಥಾವಿಧಿ ಯಂತೆ ಗಂಡನು ೯ ಗಂಟೆಗೆ ಮನೆಗೆ ಬಂದನು. ನಗುನಗುತ್ತ ಮುದ್ದಾದ ಕಮಲೆಯ ಕೈಗಳನ್ನು ಹಿಡಿಯಲು ಹೋದನು. ಅಸಹ್ಯದಿಂದ ಅವಳದನ್ನು ಕೊಡಹಿದಳು. ನಿರಾಶೆಪಡೆಯದೆ "ಕಮಲಾ, ಹೋದ ಕೆಲಸವೇನಾ ಯಿತು" ಎಂದನು. ಕಮಲೆಯ ಮುಖದಲ್ಲಿ ಕೋಪದ ಬೆಂಕಿಯು ಪ್ರಜ್ವಲಿಸು ತ್ತಿದ್ದಿತು. ನಿದ್ರೆಯಿಂದೆದ್ದ ಫಣಿಯಂತೆ "ಆಯಿತು, ನಿಮಗನುಕೂಲವಾ ಗಿಯೇ ಆಯಿತು" ಎಂದಂದು ಹೊರಟು ಹೋದಳು. ವಿಶ್ವನಾಥನ ಮುಖವರ ಳಿತು. ತನ್ನ ಪಾಡಿಗೆ ತಾನೂಟಮಾಡಿ ಎಂದಿನಂತೆ ಕಛೇರಿಗೆ ತೆರಳಿದನು.

ಸ್ನಾನಮಾಡಿ ಕಮಲೆಯು ಊಟಕ್ಕೆ ಕುಳಿತಳು. ಒಳಗೊಂದು ತುತ್ತೂ ಹೋಗದು. ಕಣ್ಣಿನಲ್ಲಿ ನೀರುಮಾತ್ರ ನಿಲ್ಲದೆ ಬರುತ್ತಿದ್ದಿತು. "ಹಾ ಯ್!" ಎಂದು ನಿಟ್ಟುಸಿರುಬಿಡುತ್ತಿದ್ದಳು. ಊಟದ ನೆಪವಾದನಂತರ ಕಿರು ಮನೆಗೆ ತೆರಳಿ ಕನ್ನಡಿಯಲ್ಲಿ ಮುಖನೋಡಿಕೊಂಡಳು. ಮುಖವೆಲ್ಲವೂ ವಿಕಾ ರವಾಗಿದ್ದಂತೆಯೂ, ತುಟಿಯಮೇಲೆ ಅಸಹ್ಯ ಚಿನ್ಹಗಳಿದ್ದಂತೆಯೂ, ದೇಹದ ಅಂಗಾಂಗನೆಲ್ಲಾ ಕುಷ್ಟುಹಿಡಿದಂತೆ ಕಾಣಬಂದಿತು. ಭಯದಿಂದ ಚಿಟ್ಟ ನೆಚೀರಿದಳು. ಅಡಿಗೆಯ ನಾಗಮ್ಮನು ಬಂದು "ಯಾಕೆ ತಾಯಿ, ಕೂಗಿ ಕೊಂಡೆ" ಎಂದಳು. ಕಮಲೆಯು ಭಯದಿಂದ ನಡುಗುತ್ತಲೇ "ರೋಗ, ಕೆಟ್ಟರೋಗ—ದೇಹವೆಲ್ಲವೂ ಕುಷ್ಠ" ಎನಲು ನಾಗಮ್ಮನು ಮೈಮೇಲೆ

ಕೈಗೂಡಿಸಿ, ಕಮಲೆಯ ಕೈಹಿಡಿದು ಹಾಸಿಗೆಯ ಬಳಿಕರತಂದು "ಭಯಪಟ್ಟಿದ್ದೀರಷ್ಟೇ. ನೀವು ಭಾಗ್ಯಲಕ್ಷ್ಮಿ. ರೋಗವೆಲ್ಲಿಂದ ಬಂತು" ಎಂದು ಸಮಾಧಾನಹೇಳಿ ಹೊರಟುಹೋದಳು. ಕಮಲೆಗೆ ಮಲಗಲು ಮನಸ್ಸೊಪ್ಪಲಿಲ್ಲ. ಎದ್ದು ಕುಳಿತು "ಈ ಸೌಂದರ್ಯವು ಮಾರಾಟಕ್ಕಾಯಿತೇ" ಎಂದಂದುಕೊಂಡು, ಕೋಣೆಯಲ್ಲಿದ್ದ ಧೂಮ್ರಪಾನಾಸಕ್ತಳಾಗಿದ್ದ ಪಾಶ್ಚಾತ್ಯಯುವತಿಯ ಭಾವಚಿತ್ರವನ್ನೊಳಗೊಂಡ ಕ್ಯಾಲೆಂಡರನ್ನು ನೋಡಿ "ನಾನೂ ನೀನೂ ಒಂದೇ—ಅಕ್ಕತಂಗಿಯರು" ಎಂದಳು. ಅನಂತರ ವಿಕಟವಾಗಿ ನಕ್ಕಳು; ಎದ್ದು ಕನ್ನಡಿಯ ಮುಂದೆಕುಳಿತು ತಲೆಯನ್ನಲಂಕರಿಸಿಕೊಂಡಳು ಅಂದವಾದ ಕುಪ್ಪಸವನ್ನು ತೊಟ್ಟು ಪುನಃ ಕನ್ನಡಿಯನ್ನು ನೋಡಿಕೊಂಡಳು ಹಿಡಿಸಲಾರದಷ್ಟು ದುಃಖಬಂದಿತು ತಡೆಯಲಾರದಷ್ಟು ಕೋಪ ಬಂದಿತು. ಹಿಡಿಹಿಡಿಯಲ್ಲಿ ಕೂದಲನ್ನು ಹಿರಿದುಹಾಕಿ ಹೆರಳನ್ನು ಬಿಚ್ಚಿ, ಮೇಜಿನ ಮೇಲಿದ್ದ ಮುಖದ ಪುಡಿಯನ್ನು ಮನಸ್ವೀಬಳಿದುಕೊಂಡು, ಮಸಿಯನ್ನು ತಲೆಯಮೇಲೆ ಸುರಿದುಕೊಂಡು ಉನ್ಮಾದ ಪಿಶಾಚಿಯಂತಾಡಿದಳು. ಸ್ವಲ್ಪ ಕಾಲಾನಂತರ ಜ್ಞಾನೋದಯವಾಯಿತು. ಶುಭ್ರವಾಗಿ ಮುಖ ತಲೆಗಳನ್ನು ತೊಳೆದುಕೊಂಡು ಬಂದು, ಕುಳಿತು ಯೋಚಿಸಲಾರಂಭಿಸಿದಳು. "ಮುಂದ ನನಗೇನುಗತಿ. ಷಂಡನಾದೀ ಗಂಡನೊಂದಿಗೆ ಬಾಳುವುದೆಂತು. ಎಲ್ಲಿಗಾದರೂ ಹೊರಟುಹೋಗಲೇ—ಹೋಗುವುದೆಲ್ಲಿಗೆ? ಮಾನಗೆಟ್ಟವಳಿಗೆ ಆಶ್ರಯ ಕೊಡುವರ್ಯಾರು." ಎಂದು ಯೋಚಿಸುತ್ತಿದ್ದಂತೆ ಗಡಿಯಾರದ ಘಂಟೆಯು ಎರಡನ್ನು ಹೊಡೆಯಿತು. ಹಿಂದಿನ ರಾತ್ರಿಯ ನೆನಪುಂಟಾಯಿತು "ಮಾಧು ವೀಗ ಬರುವನು. ಅವನಿಗೆಂತು ಮುಖವನ್ನು ತೋರಿಸಲಿ, ಸುಟ್ಟ ಈ ಹಾಳು ಮೋರೆಯನ್ನು. ಬೇಡ, ಅವನು ಬರದಂತೆ ಮಾಡುವ' ಎಂದು ಲೇಖನಿಯನ್ನು ಹಿಡಿದು ಒಂದು ಕಾಗದ ಬರೆದಳು.

ಅಣ್ಣಾ,

ನಿನ್ನೆ ನಡೆದುದನ್ನು ಮರೆಯಲಾರೆ. ಅಭಾಗ್ಯ ಜನ್ಮವಿದು ದಿಕ್ಕಿಲ್ಲದ ಆಡಮಾರಾಟದ ವಸ್ತುವಾದೆ. ಹೆಣ್ಣು ಜನ್ಮಕ್ಕೆ ಸರ್ವಸ್ವವೂ ಆದ ಮಾನವನ್ನು ಮಾರಿದೆ. ಇನ್ನು ಜೀವಿಸಿರಲೇನುಭಾಗ್ಯ ನಿನ್ನ ದಯೆಯನ್ನು—ಕರುಣೆಯನ್ನು ಮರೆಯಲಾರೆ. ಕ್ಷಣಕಾಲವಾದರೂ ನಿನ್ನ ಜತೆಯಲ್ಲಿದ್ದ ನನಗೆ

ಹೊಸಜನ್ಮ ಬಂದಿತು. ನನ್ನನ್ನು ಮರೆತುಬಿಡು ಈ ಪ್ರಪಂಚದಲ್ಲಿ ಇಂತಹ ಪಾಪಿಪ್ರಾಣಿಯು ಹುಟ್ಟಿತ್ತೆಂಬುದನ್ನು ಪುನಃ ಸ್ಮರಿಸಿಕೊಳ್ಳಲೂ ಬೇಡ

ಕಮಲಾ.

ಪತ್ರವನ್ನು ಬರೆದು, ಸಮಯಕ್ಕೆ ಸರಿಯಾಗಿಬಂದ ಅಂಚೆಯಾಳಿನೊಂದಿಗೆ ಮಾಧುವಿಗೆ ಕಳುಹಿಸಿದಳು. ಕಾಗದವೇನೋ ಕಳುಹಿಸಿದುದಾಯಿತು ಹೋಗುವುದೆಲ್ಲಿಗೆ—ಸಾಧ್ಯವಾದಲ್ಲಿಗೆ'' ಎಂದು ಬಟ್ಟೆಬರೆಗಳನ್ನು ಒಂದು ಕೈಪೆಟ್ಟಗೆಗೆ ಹಾಕಿಕೊಂಡು ಸಮೀಪದಲ್ಲಿ ಹೋಗುತ್ತಿದ್ದ ಕುದುರೆಗಾಡಿಯನ್ನು ಕರೆದುಕುಳಿತು ಹೊರಟಳು. ''ರೈಲ್ವೇ ಸ್ಟೇಷನ್ನಿಗೆ ಹೊಡಿ''ಯೆಂದು ಗಾಡಿಯವನಿಗೇನೋ ಆಜ್ಞಾಪಿಸಿದ್ದಳು ''ಆದರೆ ಹೋಗುವುದಾವ ಊರಿಗೆ? ಊರಿಗೆಯಾತಕ್ಕೆ ಹೋಗಬೇಕು. ರೈಲು ಬರುವಹೊತ್ತಿಗೆ, ಕಾಲುಜಾರಿ' ಎಂದು ಭಾವಿಸಿಕೊಂಡು ರೋಮಾಂಚನೆಯನ್ನು ಪಡೆದಳು--'' ಕೊನೆಗೂ ಭಂಡಬಾಳು ಹೀಗಾಯಿತೇ—ಛೆ! ಸಾಯುವುದು ಸುಲಭ—ಆದರೆ ಶುದ್ಧ ಹುಚ್ಚುತನ--ಈಸಬೇಕು ಇದ್ದು ಜಯಿಸಬೇಕು'' ಎಂದು ನಿರ್ಧರಿಸಿಕೊಂಡು ಸ್ಟೇಷನ್ನಿಗೆ ಬಂದು ಇಳಿದಳು. ಸದ್ಯಃಕ್ಕೆ ಯಾವ ರೈಲು ಹೊರಟು ನಿಂತಿದೆಯೆಂದು ಕೇಳಿ ಬಾರೆಂದು ಗಾಡಿಯವನಿಗೆ ಆಜ್ಞಾಪಿಸಿ ತಾನು ಒಂದೆಡೆ ನಿಂತಳು ಮದರಾಸಿನ ರೈಲು ಹೊರಡುವುದರಲ್ಲಿತ್ತು ಮೊದಲನೆಯ ಗಂಟೆಯೂ ಆಗಿತ್ತು. ಮದರಾಸಿಗೇ ಒಂದು ಟಿಕೀಟನ್ನು ಕೊಂಡು ಗಾಡಿಯಲ್ಲಿ ಕುಳಿತು ಹೊರಟಳು. ಒಂದೆರಡು ನಿಲ್ದಾಣಗಳಾದವು '' ಅಯ್ಯೋ, ಯಾತಕ್ಕೆ ಬಂದೆ. ಹಿಂದಕ್ಕೆ ಹೋಗಿಬಿಡಲೆ— ಯಾರೂ ತಿಳಿಯದಿರುವ ಜಾಗ—ಏನು ಗತಿ '' ಎಂದು ಭೀತಿಯಾಯಿತು. '' ಛೆ ! ಇಷ್ಟು ಆದಮೇಲೆ ಹಿಂದಕ್ಕೆ ಹೋಗುವುದೇ, ನಾಚಿಕೆಕೇಡು '' ಎಂದು ತನ್ನನ್ನೇ ತಾನು ನಿಂದಿಸಿಕೊಂಡು ಸುಮ್ಮನಾದಳು.

೪

ಮಾಧವನಿಗೇನೋ ಸಕಾಲಕ್ಕೆ ಕಾಗದ ತಲುಪಿತು. ಕೂಡಲೆಯೋಡಿ ಕಮಲೆಯ ಮನೆಯಬಳಿಗೆ ಬಂದನು. ಯಾರೂ ಇರಲಿಲ್ಲ. ಬಾಗಿಲಿಗೆ ಬೀಗ ಹಾಕಿದ್ದಿತು. ಕದಗಳಮಧ್ಯೆ ಒಂದು ಕಾಗದದ ಚೂರು. ಅದನ್ನೆಳೆದು ಓದಿದನು— ಮುಖವು ವಿವರ್ಣವಾಯಿತು--'' ಕೊನೆಗೂ ಗಂಡನೇ ಕೊಲೆಗೇಡಿಯಾದನೇ ? '' ಎಂದು ಬೇರೆ ಹುಚ್ಚನಂತೆ ಊರಿಗೆ ಬಂದವರನ್ನೆಲ್ಲಾ

“ ಕಮಲೆಯನ್ನು ಕಂಡಿರಾ, ಕಂಡಿರಾ” ಎಂದು ಕೇಳಿದನು. ಸದುತ್ತರ ವೆಲ್ಲಿಂದಲೂ ಬರಲಿಲ್ಲ. ಚಿಂತೆಯಿಂದ ನಿರ್ವಿಣ್ಣನಾದನು. “ ನನಗೆ ತನ್ನ ಕಥೆ ಗೊತ್ತಾಯಿತೆಂಬ ವ್ಯಸನದಿಂದ ಕಮಲೆಯು ದೇಹಪರಿತ್ಯಾಗ ಮಾಡಿದಳು” ಎಂಬ ಭಾವನೆಯು ಬಲವತ್ತರವಾಗಿ ಮೂಡಿತು ದುಃಖವು ರೋಮ ರೋಮ ದಿಂದಲೂ ಚಿಮ್ಮಿಬರುತ್ತಿದ್ದಿತು. “ ಅಯ್ಯೋ ' ನಾನೇಕೆ ಅಂತು ಉತ್ಸು ಕತೆಯಿಂದ ಅವಳ ಖೇದಾಂತ ಕಥೆಯನ್ನು ಕೇಳಿದೆ. ಅವಳ ಬಾಯಿಂದಲೇ ಹೊರಡಿಸಿದೆ. ‘ ಹೆಂಗಸರೆಂದರೆ ಎಲ್ಲರೂ ನಿನ್ನ ತಾಯಂದಿರು ' ಎಂದ ತಾಯಿಯು ಹೇಳಿದಮಾತು ಜ್ಞಾಪಕಕ್ಕೆ ಬಂದಿತು. “ಅಂತಹ ತಾಯಿಯೊಬ್ಬ ಳನ್ನು ಕೊಂದೆನಲ್ಲಾ, ನಾನೇ ಕೈಯಾರೆಕೊಂದೆನಲ್ಲಾ” ಎಂದು ಹಲುಬಿ ದನು. ಉನ್ಮಾದನಂತೆ ಊರಿನಲ್ಲೆಲ್ಲಾ ಸುತ್ತಾಡಿದನು. ಎಲ್ಲಾ ಕೆರೆಕಟ್ಟೆಗ ಳನ್ನು ಶೋಧಿಸಿದನು. ಜನರೆಲ್ಲೆಲ್ಲಿ ಸೇರುವರೋ ಅಲ್ಲೆಲ್ಲಾ ಹುಡುಕಿದನು. ಕೋಣೆಯಲ್ಲಿ ಕುಳಿತಿದ್ದಂತೆಯೇ ತಕ್ಷಣವೇ ಎದ್ದು ಬಾಗಿಲಿಗೆ ಹೋಗುವನು, “ ಇಲ್ಲ ಬರಲಿಲ್ಲ ” ವೆಂದು ನಿರುತ್ಸಾಹಗೊಳ್ಳುತ್ತಿದ್ದನು. ಗಾಳಿಯು ಬಂದು ಕದವನ್ನು ತಟ್ಟಿದರೆ ಅವಳೇ ಬಂದಳೆಂದು ಮಾಡುತ್ತಿದ್ದ ಕೆಲಸವನ್ನು ಬಿಟ್ಟೆದ್ದು ಹೋಗುವನು. ರಾತ್ರಿಯೊದೊಡನೆಯೇ ಬೇಸರವಿಲ್ಲದೆ ಮರಪೊರಗಿ ಯೇ ನಿಂತಿದ್ದು ಪುನಃ ಅವಳು ಆ ಬಂಗಲೆಯಿಂದಲೇ ಬರುವಳೇನೋ ಎಂದು ನಿರೀಕ್ಷಿಸುವನು. ಆದರವಳೆಲ್ಲಿಂದಬರಬೇಕು? ಮನಸ್ಸಿನಲ್ಲಿ ದುಃಖವೊಂದು ಬೇರೂರಿನಿಂತರೆ ವಿವೇಚನೆಗೆ ಸ್ಥಳಕೊಡುತ್ತದೆಯೇ ! ಹೀಗಾಗಿ ಮಾಧುವು ಕೃಶನಾಗುತ್ತಬಂದನು. ಈ ವೇಳೆಗೆ ಪರೀಕ್ಷೆಯೂ ಸಮೀಪಿಸುತ್ತ ಬಂದಿತು

“ ಪರೀಕ್ಷೆಯು ಹಾಳಾಗಿ ಹೋದರೆ ಹೋಗಲಿ” ಎಂದು ಪುಸ್ತಕಗ ಳನ್ನು ಕೆಲದಿವಸಗಳು ಮುಟ್ಟಲೇ ಇಲ್ಲ. ಆದರೆ ನೆನಪುಬಂದಿತು. ಜೂಲೈ ತಿಂಗಳಲ್ಲಿ ಊರು ಬಿಟ್ಟುಬರುವಾಗ ತಾಯಿಗೆ ನಮಸ್ಕರಿಸಿದಾಗ ಆಕೆಯು ತನ್ನನ್ನೆಬ್ಬಿಸಿ, ಮುಖವನ್ನಪ್ಪಿ “ಮಾಧೂ ಈಸಲ ನೀನು ಬಿ.ಎ. ಮಾಡುವೆ ನನ್ನನ್ನು ಹಿಡಿಯುವವರುಂಟೇ” ಎಂದಂದದ್ದು ಜ್ಞಾಪಕಕ್ಕೆ ಬಂದಿತು “ತಾನೀಸಲ ಪರೀಕ್ಷೆಯಲ್ಲಿ ತೇರ್ಗಡೆ ಹೊಂದದಿದ್ದರೆ ತಾಯಿಯೇನಂದು ಕೊಳ್ಳುವಳು ತನಗಾಗಿ ಎಷ್ಟುನೊಂದು ಕೊಳ್ಳುವಳು. ಎಷ್ಟುಮರುಗುವಳು.' ಎಂದಂದುಕೊಂಡು ಹಗಲೂ ರಾತ್ರಿ ಪಾಠಶ್ರವಣಕ್ಕಾರಂಭಿಸಿದನು. ಕಮ ಲೆಯ ನೆನಪು ಮರೆತು ಹೋಗಲೆಂದೇ ಸುಮ್ಮನೆ ಟೀ ಕುಡಿಯುವುದು-ನಿದ್ರಾ

ಹಾರಗಳನ್ನು ಬಿಟ್ಟು ಓದುವುದು. ಗೆಳೆಯರು "ಬೇಡಬೇಡ" ವೆಂದರೂ ಕೇಳನು. ಸಂಜೆಯವೇಳೆಯಲ್ಲಿ ಮನೆಬಿಟ್ಟು ಹೊರಗೆ ಹೋಗನು. "ಪರೀಕ್ಷೆಯೊಂದು ಮುಗಿದು ಹೋದರೆ— ಈ ಹಾಳು ಊರನ್ನೇ ಬಿಟ್ಟು ಹೊರಟು ಹೋಗುವೆನು" ಎಂದು ನಿರ್ಧರಿಸಿಕೊಂಡು. ಎಲ್ಲವನ್ನೂ ಅದಕ್ಕಾಗಿ ತೊರೆದನು. ಎಷ್ಟೋ ವೇಳೆಗಳಲ್ಲಿ ಓದಿದ್ದೆಲ್ಲವೂ ನಿರರ್ಥಕವಾಗುತ್ತಲೇ ಇದ್ದಿತು. ಒಂದೂ ಜ್ಞಾಪಕವೇ ಇರುತ್ತಿರಲಿಲ್ಲ. ಆ ವೇಳೆಯಲ್ಲಿದ್ದು ಕೂಜಿಯು ನೀರಿನಿಂದ ತಲೆಯನ್ನು ನೆನಸಿಕೊಂಡು ಪುನಃ ಓದಲಾರಂಭಿಸುವನು. ಹೀಗಾಗಿ ಪರೀಕ್ಷೆ ಮುಗಿಯುವುದರೊಳಗಾಗಿ ದೇಹದಂಡನೆಯೊಂದು ಕಡೆ ಮನೋದಂಡನೆಯೊಂದು ಕಡೆ-ಮಾಧುವು ನಾಲ್ಕರಲ್ಲಿ ಒಂದಾಗಿದ್ದನು. ಕಣ್ಣುಗಳು ಗುಣಿಬಿದ್ದವು. ದೇಹವು ಕೃಶವಾಗಿ ಎಲುಬುಗೂಡು ಹೊರಕಾಣುತ್ತಿದ್ದಿತು. ಕೆನ್ನೆಗಳಲ್ಲಿದ್ದ ಕಾಂತಿಯು ಅಳಿಯಿತು. ಸಾಲದುದಕ್ಕೆ ಮಧ್ಯೆಮಧ್ಯೆ ಬಾಯಿ ಮೂಗುಗಳಿಂದ ರಕ್ತಬರುತ್ತಿದ್ದಿತು.

ಪರೀಕ್ಷೆಯೂ ಬಂದಿತು. ನಾಲ್ಕೈದು ದಿವಸಗಳು ನಡೆದು ಮುಗಿಯಿತು. ಮಾಧುವಿನ ತಲೆಯಿಂದ ದೊಡ್ಡ ಭಾರವನ್ನಿಳುಹಿದಂತಾಯಿತು. "ತಾಯ್ತಂದೆಗಳನ್ನಾ ಕಾಣುವೆನಲ್ಲಾ. ಪುನಃ ನನ್ನ ಪವಿತ್ರಗೃಹಕ್ಕೆ ಹೋಗುವೆನಲಾ" ಎಂದು ಅವನ ಮನಸ್ಸು ಭಾವನೆಯೆಂಬ ಹಬ್ಬದೂಟದಲ್ಲಿ ಹಿಗ್ಗಿತು. ಗೆಳೆಯರಿಂದ ಬೀಳ್ಕೊಂಡು ನಿಸರ್ಗಮಾತೆಯ ಕ್ರೀಡಾವನದಂತಿದ್ದ ತನ್ನ ಸ್ವಗ್ರಾಮಕ್ಕೆ ತೆರಳಿದನು.

* * * * *

ಮಾಧುವಿನಲ್ಲಾಗಿದ್ದ ದೇಹ, ಮನಸ್ಸುಗಳ ಮಾರ್ಪಾಟು ತಾಯಿಗೆ ಕಾಣದೆ ಹೋಗಲಿಲ್ಲ. ಯಾವ ಕೆಲಸಕ್ಕೂ ಅವನು ತೋರುತ್ತಿದ್ದ ಉತ್ಸಾಹವೀಗ ನಿರುತ್ಸಾಹಕ್ಕೆ ಎಡೆಕೊಟ್ಟಿತ್ತು-ಹಲವು ವೇಳೆ ತಾಯಿಯು ಬಹು ಅಕ್ಕರೆಯಿಂದ ಕಾರಣವನ್ನು ಕೇಳುತ್ತಿದ್ದಳು. ಹೆಂಗಸಿಗೆ ಸಂಬಂಧಪಟ್ಟ ವ್ಯವಹಾರವೆಂದು ಮಾಧುವು ಹೇಳಲು ಹಿಂಜರಿಯುತ್ತಿದ್ದನು. "ದೇವತೆಯಂತಹ ತಾಯಿಗೆ ಈಗ ವಂಚಿಸಬೇಕಲ್ಲ!" ಎಂದು ಮನಸ್ಸು ಸಂತಾಪಗೊಳ್ಳುತ್ತಿತ್ತು ಆದರೂ ವಿಧಿಯಿಲ್ಲ. ಇದನ್ನರಿತರೆ ಆಕೆಯು ಹೆಚ್ಚು ಸಂಕಟಪಡಬಹುದು ಎಂದು ಸುಮ್ಮನಾದನು. ತಾಯಿಯು ಉಪಚಾರ ಆರೈಕೆಗಳಿಂದ ಮಗನ

ಮನಸ್ಸನ್ನು ರಮಿಸಲೆತ್ನಿಸುತ್ತಿದ್ದಳು. ಆದರೆ ಚಿಂತೆಗೆ ಮೀಸಲಾದ ಮನದ ಮೇಲೆ ಯಾವ ಪರಿಣಾಮತಾನೆ ಆದೀತು?

ಮಗನು ವಯಸ್ಕ, ಆದ್ದರಿಂದ ತಾಯಿಯಲ್ಲೂ ಹೇಳಬಾರದ ಚಿಂತೆಗಳು ಮನಸ್ಸಿಗೆ ಬರುವುವು, ಆದ್ದರಿಂದ ಅನುರೂಪಳಾದ ಬಾಲಿಕೆಯನ್ನು ತಂದು ಮದುವೆ ಮಾಡಿದಲ್ಲಿ ಇದರ ಪರಿಹಾರವಾಗುವುದೆಂದು ಮಾಧುವಿನ ತಾಯಿ ತಂದೆಗಳು ನಂಬಿದರು. ಮಾಧುವನ್ನು ಒಪ್ಪಿಸಿದ ಹೊರತೂ, ಅವನು ಸಂತೋಷವಾಗಿ ಒಪ್ಪಿದಹೊರತೂ, ಇತರ ಮೂರ್ಖ ತಾಯಿ ತಂದೆಗಳಂತೆ ಬಲವಂತದಿಂದ ಮದುವೆ ಮಾಡಿಬಿಡುವುದು ಅವರಿಗೆ ಸರಿಯೆನಿಸುತ್ತಿರಲಿಲ್ಲ. ಮೀನಾಕ್ಷಮ್ಮನವರು ತಮ್ಮ ಬುದ್ಧಿಯನ್ನೆಲ್ಲಾ ವ್ಯಯಮಾಡಿದರು. ಪ್ರೀತಿಯಿಂದ ಹೇಳಿದರು—ಕನಲಿ ಹೇಳಿದರು—ಅಂಗಲಾಚಿದರು—ಕಂಬನಿಗರೆದರು—"ಮನೆಗಿರುವನು ನೀನೊಬ್ಬನೇ ನೀನೂ ಹೀಗೆ ಸನ್ಯಾಸತೆಗೆದುಕೊಂಡು ಕುಳಿತರೇನುಗತಿ ಮಾಧೂ" ಎಂದು ತಾಯಿಯ ಕರುಳನ್ನು ತೋರಿ ಹೇಳಿದರು. ಮಾಧುವು ಕಲ್ಲುಕಂಬದಂತೆ ಹೇಳುತ್ತಿದ್ದದ್ದೆಲ್ಲವನ್ನೂ ಕೇಳಿ "ಅಮ್ಮಾ ನಿನ್ನ ಮನಸ್ಸಿಗೆ ವಿರೋಧವಾಗಿ ನಾನು ಎಂದಿಗೂ ನಡೆಯುವುದಿಲ್ಲ. ಈಗ್ಗ ಬೇಡ. ಹೇಗೂ ಈ ವರ್ಷ ಬಿ. ಎ. ಆದರೆ ಮುಂದೆ ಬೊಂಬಾಯಿಗೋ ಮದರಾಸಿಗೋ ಹೋಗಲೇಬೇಕು. ಅದೂ ಎರಡೇವರ್ಷ—ಲಾ ಪರೀಕ್ಷೆ ಮಾಡಿಬಂದು ಮದುವೆಯಾಗುತ್ತೇನೆ" ಎಂದನ್ನುತ್ತಿದ್ದನು. ತಾಯಿಯು ವಿಧಿಯಿಲ್ಲದೆ ಸುಮ್ಮನಾಗುತ್ತಿದ್ದಳು.

ಅಂತೂ ಇಂತೂ ಬೇಸಿಗೆಯನ್ನು ಮಾಧುವು ಊರಿನಲ್ಲೇ ಕಳೆದನು ಪರೀಕ್ಷೆಯಲ್ಲಿ ತೇರ್ಗಡೆಯಾದ ಸುದ್ಧಿಯು ಬಂದು ಮನದ ದುಗುಡವನ್ನು ಸ್ವಲ್ಪನಿವಾರಿಸಿತ್ತು. ಮುಂದೆ ಎಲ್ಲಿಗೆ ಹೋಗುವುದೆಂದು ಚರ್ಚೆಮಾಡಿಮಾಡಿ ಕೊನೆಗೆ ಮದರಾಸನ್ನೇ ಗೊತ್ತುಮಾಡಿದ್ದನು. ಬೊಂಬಾಯಿಗೆ ಹೋಗಬೇಕೆಂದು ಮಾಧುವಿನಾಸೆ, "ಊರಿಗೆ ಮದರಾಸೇ ಹತ್ತಿರ, ಬೆಂಗಳೂರಿಗೆ ಆರೇ ಘಂಟೆಗಳ ಪ್ರಯಾಣ ಅಲ್ಲಿಗೆ ಹೋಗು" ಎಂದು ಶಂಕರರಾಯರ ಸಲಹೆ, "ಎಲ್ಲಿಗೂ ಬೇಡ ಮಾಧು—ಹಾಳು ದೂರದೇಶ! ಖಾಯಿಲೆ ಕಸಾಲೆ ಬಿದ್ದರೆ ನೋಡಿಕೊಳ್ಳುವವರು ಯಾರು" ಎಂದು ತಾಯಿಯ ಅಭಿಪ್ರಾಯ. ಹಾಗೂ ಹೀಗೂ ಮದರಾಸೇ ನಿಶ್ಚಯವಾಗಿಹೋಯಿತು.

೫.

ಮಾಧುವಿಗೆ ಮದರಾಸು ವಾಸವು ಅಂದವಾನಿನ ಪ್ರವಾಸಕ್ಕಿಂತಲೂ ಸುಖಕರವಾಗಿಯೇ ಇದ್ದಿತು. ವಿಧಿಯಿಲ್ಲದುದಕ್ಕೆ ಅನಿರ್ವಾಹಕವಾದ ದುಂದುವೆಚ್ಚವನ್ನೂ ಸಹಿಸಿಕೊಂಡು ಬ್ರಾಡ್ವೆಯಲ್ಲಿದ್ದ ಒಂದು ಕ್ಲಬ್ಬಿನಲ್ಲಿದ್ದನು. ಇವನ ಶುದ್ಧ ಭಾವನೆಗಳು, ಉಚ್ಚಸಂಭಾಷಣೆಗಳು ನ್ಯಾಯುಜ್ಞಾನಾರ್ಥಿಗಳಿಗೆ ಸಹಜವಾಗಿ ರುಚಿಸುತ್ತಿರಲಿಲ್ಲ. ಆದ್ದರಿಂದಲ್ಲಿಯೂ ಮಾಧುವು ಅರ್ಥಾತ್ ಅಕ್ಷರಶಃ ಏಕಾಂಗಿ.

ಒಂದು ದಿವಸ ಸಂಧ್ಯಾಕಾಲ. ಬಿಸಿಲಿನ ಬೇಗೆಯು ಕಡಿಮೆಯಾಗಿತ್ತು. ಮಾಧುವು ಯಾವದೋ ಕಾರ್ಯಾರ್ಥಿಯಾಗಿ 'ಸ್ವಾಮಿಪಿಳ್ಳೆ' ಬೀದಿಯಲ್ಲಿ ಹೊರಟನು. ಆ ಬೀದಿಯು ಗಣಿಕೆಯರ ವಸಂತೋದ್ಯಾನವೆಂಬುದನ್ನರಿತಿದ್ದು ಅದನ್ನು ತ್ಯಾಜ್ಯವೇ ಮಾಡಿದ್ದನು. ಆದರಿಂದು ಕೆಲಸ ಗೌರವವು, ಗಮ್ಯಸ್ಥಾನಕ್ಕೆ ಕ್ಷಿಪ್ರವಾಗಿ ಒಯ್ಯುತ್ತಿದ್ದ ಆ ಬೀದಿಯಲ್ಲಿ ಮಾಧುವನ್ನೆಳೆಯಿತು. ನೆತ್ತಿಬಗ್ಗಿಸಿಯೇ ಹೊರಟರೂ ಸ್ವಭಾವಚಾಪಲ್ಯದಿಂದ ಆಗಾಗ್ಗೆ ತಲೆಯೆತ್ತಿ ನೋಡುತ್ತಿದ್ದನು. ಸುಂದರವದನದ ಇಂದುಮುಖಿಯರ ರೂಪುತಾಳಿದ್ದ ಮೃತ್ಯುವು ಆಹ್ವಾನಿಸುತ್ತಿತ್ತು. ಭವಿಷ್ಯತ್ಪರಿಣಾಮಗಳನ್ನು ನೆನೆದು ತಲೆಬಾಗಿ ಮುಂದೆ ನಡೆಯುತ್ತಿದ್ದನು. ಮನಸ್ಸು ಹರಿಣಾಕ್ಷಿಯರ ಕಡೆಗೆ ಹರಿಣಿಯಂತೆ ಹಾರುತ್ತಿದ್ದರೂ ಸ್ಥಿರಾಸನದಲ್ಲಿ ತಪೋನಿಷ್ಠೆಯಿಂದ ಕುಳ್ಳಿರುವ ಮುನಿಯು ವಿಲೋಭನೆಗಳನ್ನಿರಿವಂತೆ ಮಾಧುವು ಮದನನೊಂದಿಗೆ ಕದನವಾಡುತ್ತ ಮುಂದೆ ತೆರಳುತ್ತಿದ್ದನು. ಗಣಿಕೆಯರ ಹಾವಭಾವ ವಿಲಾಸಗಳ ಹಿಂದಿದ್ದ ಕಪಟಭಾವನೆಗಳನ್ನು ಸ್ಮರಣೆಗೆ ತಂದುಕೊಂಡು ಕ್ರೋಧದಿಂದ ಉಜ್ವಲವಾಗುತ್ತಿದ್ದನು; ಮರುಕ್ಷಣವೇ ಅವರನ್ನು ಆ ಆತ್ಮ ವಿಕ್ರಯದ ಸ್ಥಿತಿಗೆ ನೂಕಿದ ಸಮಾಜವನ್ನು ಶಪಿಸುವನು. ನಾರಿಯು ಜಾರಿಣಿಯಾದಳೆಂದು ಸಮಾಜ ಸೋಪಾನದಿಂದಾಕೆಯನ್ನು ತಳ್ಳುವವರು ಜಾರರ ಪ್ರೋತ್ಸಾಹವಿಲ್ಲದೆ ಜಾರೆಯರು ಅಭಿವರ್ಧಿಸಲಾರರೆಂಬುದನ್ನೇತಕ್ಕೆ ಮರೆಯುವರು ?-ಹಳಿಯುವ ಹಕ್ಕಿದೆಯೆಂದರಿಯುವವರು ಕೊಳೆಯುತ್ತಿರುವವರನ್ನು ಉಳಿಸಲೇಕೆತ್ನಿಸರು? ಬಾಲ್ಯದ ಅಜ್ಞಾನವನ್ನು ಸ್ವಕಾರ್ಯಸಾಧನೆಗೆ ಉಪಯೋಗಿಸಿಕೊಂಡು ಮೂಢ ರೂಢಿಯಾಚರಣೆಗಳ ಮಡುಲಿಗೆ ಮಕ್ಕ

ಳನ್ನು ತಳ್ಳಿ ಅವರ ಜೀವಿತಗಳನ್ನು ಹಾಳುಮಾಡುವ ಮಾತೆ ಕುಂಟಲಿಗಿಯು ರನ್ನು ಶಾಸನಮಾಡರೇಕೆ ?-ಎಂಬುದೇ ಭಾವನೆಗಳು ಅವನ ಹೃದಯವನ್ನು ಅಂಡಲೆಯ ಸಾಗರದೊಳು ವಿಹಾಯಿಸಿದವು. ಭಾವನೆಗಳು ಹೃದಯದಲ್ಲಿ ಬೇಯುತ್ತಬೇಯುತ್ತ ಮಾಧುವನ್ನು ಮತ್ತನಂತೆ ಮಾಡಿದ್ದವು. ಗಾಡಿ ಮೋಟಾರುಗಳು ಬರುವಿಕೆಯೇ ಅವನಿಗೆ ಗೋಚರವಾಗುತ್ತಿರಲಿಲ್ಲ. ಇಂತು ನಿರ್ಜೀವಯಂತ್ರದಂತೆ ಹೋಗುತ್ತಿದ್ದಾಗ ಇದ್ದಕ್ಕಿದ್ದಂತೆ ವೈಮೇಲೆ ಛಾಟಿಯ ಏಟುಬಿದ್ದು ಮಾಧುವನ್ನೆಚ್ಚರಿಸಿತು. ಮಾಧುವುಕೆರಳಿ ಗಾಡಿಯುವ ನನ್ನು ನಿಂದಿಸಲು, ಒಳಗಿನಿಂದ ನವಯೌವನದ ಭಾರದಿಂದ ಜಗ್ಗುತ್ತಿದ್ದ ಸುಂದರಿಯೊಬ್ಬಳು ಹೊರಗೆ ಇಳಿಯುತ್ತಾ—ಮಾಧುವನ್ನು ನೋಡಿ ಸ್ತಂಭೀ ಭೂತಳಾಗಿ-ಎಚ್ಚತ್ತವಳಂತೆ ಎಚ್ಚತ್ತು ಗಾಡಿಯುವನಾವರ್ತನವನ್ನು ಖಂಡಿ ಸಿದಳು. ಆಕೆಯನ್ನು ನೋಡಿ ಮಾಧುವೂ ಶಿಲಾಸ್ತಂಭದಂತೆ ನಿಂತು ಬಿಟ್ಟನು-ಥಡಿಯುಪೆಟ್ಟು ಮರೆತು ಹೋಯಿತು.—ತೆರದಾಲಿಗಳು ಹಾಗೆಯೇ ನಿಂತವು-ಅವನ ಬಾಯಿಂದ ಅಸ್ಪಷ್ಟಮಾತುಗಳು,

"ಕಮಲಾ-ನೀ ನಿಲ್ಲಿ...."

ಆಕೆಯು ಮಾತನಾಡ ಬೇಡವೆಂದೂ ಜೊತೆಯಲ್ಲಿಯೇ ಬಾಳೆಂದು ಕೈಸನ್ನೆಮಾಡಿ ಪಕ್ಕದಲ್ಲಿದ್ದ ಒಂದು ಮನೆಯನ್ನು ಹೊಕ್ಕಳು. ಮಾಧುವು ಮರುಮಾತನಾಡದೆ ಹಿಂಬಾಲಿಸಿದನು.

ಸೌಧದ ಎರಡನೆಯ ಉಪ್ಪರಿಗೆಯಲ್ಲಿ ಸುಂದರಿಯುವಾಸ. ಅಲ್ಲಿಗೆ ಮಾಧುವನ್ನು ಕರೆದೊಯ್ದು ಉಪಚರಿಸಿ ಕುಳ್ಳಿರಿಸಿದಳು. ಅನುನಯದ ಒಂದೆ ರಡು ಮಾತುಗಳನ್ನಾಡಿ ಪಕ್ಕದಕೋಣೆಗೆ ಹೋದಳು. ಮಾಧುವು ತನ್ನನ್ನೆ ನಂಬದಂತಾದನು. ಆಕೆಯ ವರ್ತನವೂ, ತನ್ನ ದೌರ್ಬಲ್ಯ ಪ್ರದರ್ಶನವೂ ಅವನಿಗೇ ಅತ್ಯಾಶ್ಚರ್ಯವನ್ನುಂಟುಮಾಡಿತು. ಸುತ್ತಲೂ ಎವೆಯಿಕ್ಕದೆ ನೋಡಿದನು-ಪ್ರಾಶ್ಚಾತ್ಯಯುವತಿಯರಬಗೆಬಗೆಯ ನಗ್ನಚಿತ್ರಗಳು; ಕಿಟಕಿ-ಬಾಗಿಲುಗಳಿಗೆ ಮಣಿಯ ತೆರೆಗಳು—ನೆಲಕ್ಕೆ ಬೆಲೆಬಾಳುವ ರತ್ನಗಂಬಳಿ, ಜಿಂಕೆ, ಹುಲಿಗಳ ಚರ್ಮಗಳು,—ಎಲ್ಲೆಲ್ಲಿಯೂ ಶ್ರೀಮಂತಿಕೆಯ ಲೀಲೆ, ವಿಧವಿಧ ವಾದನಗಳು. ಇವುಗಳನ್ನು ಕಂಡು ಬೆಕ್ಕಸ ಬೆರಗಾಗಿ ತನ್ನ ಕೊನೆ ಗಾಲವೇ ಇದೆಂದು ನೆನೆದು ಹೊರಡಲನುವಾದನು. ಸುಂದರಿಯು ತಟ್ಟಿ

ಯೊಂದರಲ್ಲಿ ಬಗೆಬಗೆಯ ತಿನಿಸುಗಳನ್ನೂ, ಶೀಷೆ ಗ್ಲಾಸುಗಳನ್ನೂ ಇಟ್ಟು ಕೊಂಡು, ಹಿಡಿದು ನಿಂತಿದ್ದಳು. ಮಾಧುವು ನಿರುಪಾಯದಿಂದ ಕುಳಿತನು.

ಸುಂದರಿಯು ಮಾತನಾಡದೆ ತಿನಿಸುಗಳ ತಟ್ಟೆಯನ್ನು ಮಾಧುವಿನ ಕೈಗಿತ್ತು, ಎರಡು ಗ್ಲಾಸುಗಳಿಗೆ ಕೆಂಪನೆಯ ಪಾನೀಯವನ್ನು ಹಾಕಿ— ಒಂದನ್ನು ಮಾಧುವಿಗೆ ಕೊಡುತ್ತ, ಮತ್ತೊಂದನ್ನು ತನ್ನ ಕೈಯಲ್ಲಿ ಹಿಡಿದು "ತೆಗೆದುಕೊಳ್ಳಿ-ಮಾಧುರಾಯ್ರೆ-ಅಪರೂಪವಾದ ಪದಾರ್ಥ-ಷ್ಯಾಂಪೇನ್ (champagne)"

ಮಾಧುವು ಒಲ್ಲೆನೆಂದು ಹೇಳಿ ನೀರನ್ನು ಮಾತ್ರ ಕುಡಿದು ಕುಳಿತನು. ಮಾಧುವಿನ ಭಾಗದ ಪಾನೀಯವನ್ನೂ ಸುಂದರಿಯೇ ಪೂರೈಸಿದಳು. ಎಲ್ಲ ವನ್ನೂ ಈಕ್ಷಿಸುತ್ತಲಿದ್ದ ಮಾಧುವು ತಾನು ಯಾರು-ಎಲ್ಲಿರುವೆನೆಂಬುದನ್ನು ನೆನೆದು ಧೈರ್ಯ ತಾಳಿ...

"ಕಮಲಾ, ಇದು ಎಂದಿನಿಂದ?"

"ಮಹನೀಯರಾದ ಕೆಲವು ಪುರುಷರ ಸಹವಾಸ ಬೆಳೆಸಿದಂದಿನಿಂದ."

"ಅಂದರೆ..."

"ಅಂದರೇನು-ಗೊತ್ತಾಗುವುದಿಲ್ಲವೇ—ನೀವು ಯಾರ ಮನೆಗೆ ಬಂದಿರುವಿರೆಂಬುದು!"

"ಇಲ್ಲ. ದಿಗ್ಭ್ರಮೆಯಿಂದ ನನ್ನ ಯೋಚನಾಶಕ್ತಿಯು ಕುಂದಿದೆ."

"ಮದರಾಸಿನ (De-luxe) ಡಿಲಕ್ಸ್ ವೇಶ್ಯೆ ಕಮಲಾಂಬಾ ಮನೆಯಲ್ಲಿ-ಈಗಲಾದರೂ ತಿಳಿಯಿತೇ?"

"ಕಮಲಾಂಬಾ-ವೇಶ್ಯೆ-ಕಮಲಾ, ಕಮಲಾ-ನೀನು ಸೂಳೆ ವೃತ್ತಿಗಿಳಿದೆಯಾ?"

"ಹೌದು-ಇಳಿದೆ-ಹಸಿವಿನ ಬಾಧೆ ತಾಳಲಾರದೆ."

"ಅಂದೇಕೆ, ಚೀಟಿ ಬರೆದಿಟ್ಟು ಇಲ್ಲಿಗೆ ಬಂದುಬಿಟ್ಟೆ."

ಪೂರ್ವಸ್ಮರಣೆಯು ಆಕೆಯ ಅಂತಃಕರಣವನ್ನು ಕಲಕಿತು. ವೇಶ್ಯಾ ಸಹಜವಾದ ನಗೆಯು ದುಃಖದಲೆಗಳಲ್ಲಿ ಅಂತರ್ಧಾನ ಹೊಂದಿತು. ತಲೆ ಬಗ್ಗಿಸಿ, ಸೀರೆಯ ಕೊನೆಯಿಂದ ಕಂಬನಿಗಳನ್ನೊರಸಿಕೊಂಡು.

"ನೀವೇಕೆ ಬಂದಿರಿ-ಇಲ್ಲಿಗೆ—ಈ ಪಾಪಿ...."

" ಕಮಲಾ, ನೀನು ಪಾಪಿಯಲ್ಲ. ನೀನು ಪಾಪಿನಿಯಾಗಲಾರೆ-ಹೇಳು-ನನ್ನಲ್ಲಿ ಹೇಳು-ಇಲ್ಲಿಗೆ ಹೇಗೆ ಬಂದೆ ? "

" ಕೇಳಿ, ಜೀವನದಲ್ಲಿ ಆವತ್ತು ಬೇಸರ ಬಂದು ಪ್ರಾಣ ಕಳೆದುಕೊಳ್ಳಲೆತ್ನಿಸಿದೆ-ಅದಕ್ಕೆ ಧೈರ್ಯ ಸಾಲದೆ ಹೋಯಿತು. ತಕ್ಷಣವೇ ನನ್ನ ಸಂಬಂಧಿಯೊಬ್ಬನು ಮದರಾಸಿನಲ್ಲಿ ಕೆಲಸದಲ್ಲಿದ್ದದ್ದು ಜ್ಞಾಪಕಕ್ಕೆ ಬಂದಿತು. ಆತನು ಮೊದಲಿನಿಂದಲೂ ನನ್ನಲ್ಲಿ ಪುತ್ರೀವಾತ್ಸಲ್ಯವನ್ನಿಟ್ಟಿದ್ದುದರಿಂದ, ಅವನು ನನ್ನನ್ನು ಈ ಪಾಪಿ ಗಂಡನಿಂದ ಉದ್ಧಾರ ಮಾಡಬಹುದೆಂದು ಭಾವಿಸಿ, ಮದರಾಸಿಗೆ ಬಂದೆ. ಇಂತಹ ದೊಡ್ಡ ಊರಿನಲ್ಲಿ ನನ್ನನ್ನು ಕೇಳುವವರಾರು ? ಅಲೆದಲೆದು ಕೊನೆಗೆ ಆತನಿಗೆ ಕೊಯಮುತ್ತೂರಿಗೆ ವರ್ಗವಾಯಿತೆಂಬುದನ್ನರಿತೆ. ಏನು ಮಾಡಲಿ! ನನಗ್ಯಾರು ದಿಕ್ಕು ಎಂದು ಚಿಂತಿಸುತ್ತಿರುವಲ್ಲಿ ನಮ್ಮೂರಿನವನೊಬ್ಬನು ಸಂಧಿಸಿ ತನ್ನ ಮನೆಗೆ ಕರೆದೊಯ್ದನು. ಕೆಲ ದಿವಸಗಳು ಸಹೋದರಿಯಂತೇ ಪೋಷಣೆ ನಡೆಯಿತು. ಅನಂತರ ಕಲಹಕ್ಕಾರಂಭ. ಬಾಧೆಯನ್ನು ತಾಳಲಾರದೆ ಮನಸ್ಸನ್ನು ಹಿರಿದಗಲಿಸಿದೆ. ಆ ಒಣ ಕಾಮದ ಬಯಕೆಯೂ ಅವನಿಗೆ ಬೇಗ ಮುಗಿದುಹೋಯಿತು. ಈ ವೇಳೆಗೆ ನನ್ನ ಸೌಂದರ್ಯದ ಖ್ಯಾತಿ ಬೆಳೆಯಿತು. ನೋಟಕರು ಹೆಚ್ಚಾದರು. ಕೆಲ ಹೊಸ ಹೆಂಗಸರು ಗೆಳತಿಯರಾದರು ಸರಿ! ಮುಂದಿನದನ್ನು ವಿವರಿಸಲೇತಕ್ಕೆ—ಜಮೀನುದಾರರು, ರಾವ್ ಬಹದ್ದೂರರು, ಈಗ ಸರ್ ಸಾಹೇಬರುಗಳು, ಈ ಮನೆಯೂ ಅವರಲ್ಲಿ ಒಬ್ಬರದು ನಾನು ರಾಣಿ ಅವರು ರಾಜರು. ವಿಧಿಯಂತೂ ನೀತಿ ಪಥದಲ್ಲಿ ನನ್ನನ್ನು ಬಾಳಗೊಡುವುದಿಲ್ಲ; ಇರುವ ತನಕ ಸುಖವಾದರೂ ಪಟ್ಟುಬಿಡುವ ಎಂದು ನಿರ್ಧರಿಸಿ ಬಾವಟವನ್ನೇ ಹಾರಿಸಿಬಿಟ್ಟೆ. "

" ಈ ಬಾಳಿನಲ್ಲಿ ಸುಖವೇ ? "

" ನಿಮ್ಮ ದೃಷ್ಟಿಯಲ್ಲಲ್ಲ. ನೀವು ಸ್ವರ್ಗದಲ್ಲಿರಲು ಯೋಗ್ಯರು. ನಮ್ಮ ಬಾಳಿಗದೆಲ್ಲಿ ಸಾಧ್ಯ. ನಾನು ನೀತಿಮಾರ್ಗವನ್ನು ಅರಸುತ್ತ ಹೋದರೂ ಯಾರಾದರೂ ಬಂದು ಬೇರೆಯ ಮಾರ್ಗಕ್ಕೆ ಎಳೆದೊಯ್ಯುತ್ತಾರೆ. ತಪ್ಪು ಯಾರದು. ಅಬಲೆಯಾದ ನನ್ನದೇ ? "

"ನೀನು ಅಬಲೆಯಲ್ಲ ಸಬಲೆ. ಆದರೆ ಮನೋದಾರ್ಢ್ಯ ಮಾತ್ರ ವಿಲ್ಲ. ಅದೊಂದಿದ್ದರೆ ಭಾರತ ಮಾನಿನಿಯರ ಮುಕುಟಮಣಿಯಾಗುತ್ತಿದ್ದೆ."

"ಅದು ನಿಮ್ಮ ಹುಚ್ಚು" ಎಂದಂದು ಗಹಗಹಿಸಿ ನಕ್ಕಳು ಆಹಾ! ಅದರ ಹಿಂದೆಂತಹ ದುಃಖಜ್ವಾಲೆಗಳು !! ಮಾಧುವಿಗೆ ಆ ಜಾಗೆಯು ಅಸಹನೀಯವಾಗುತ್ತ ಬಂದಿತು. ಕಮಲೆಯಿಂದ ಬೀಳ್ಕೊಂಡು ಹೊರಟನು.

"ಮತ್ತೆ ದರ್ಶನವನ್ನು ಯಾವಾಗ ಕೊಡುವಿರಿ."

"ಈ ಜನ್ಮದಲ್ಲಲ್ಲ."

ಎಂದು ಹೇಳಿ ಮುಂದುವರಿದ. ಅನೈಚ್ಛಿಕವಾಗಿ ಕಣ್ಣುಗಳು ಹಿಂತಿರುಗಿದವು. ಚಂಡಮಾರುತನ ಹೊಡೆತಕ್ಕೆ ಬಾಡಿ ಸೊರಗಿ ಬೀಳುತ್ತಿದ್ದ ಲತೆಯಂತೆ ಕಮಲೆಯು ಕನ್ನಡಿಯ ಕಿಟಕಿ ಹಿಂದೆ ದೈನ್ಯ ನೋಟದಿಂದ ನಿಂತಿದ್ದಳು. ಮನಸ್ಸಿನಲ್ಲಿ ಕಾರುಣ್ಯದ ಕಿರಣ ಚಿಮ್ಮಿತು. ಆಗಲೇ ಹಿಂತೆರಳಿ ಅವಳನ್ನು ಸಂತೈಸುವ ಎಂದೆನಿಸಿತು. ಮರುಕ್ಷಣವೇ, ಹೃದಯವು ಸಂಸ್ಕೃತವಾಗಿಲ್ಲ, ಅದು ಈಗ ಪ್ರಬಲ ಅಗ್ನಿಜ್ವಾಲೆ. ನಾನೂ ಒಂದು ಪತಂಗವಾದರೆ' ಎಂದು ಶಂಕೆಯಾಯಿತು....ಕಾಲೆಳೆದುಕೊಂಡು ಹೊರಟ.

* * * *

ಅಂದು ಮೊದಲನೆಯ ದಿವಸ ಕಮಲೆಯನ್ನು ಕಂಡಾಗ ನಡೆದ ಮನೋವ್ಯಾಪಾರವೇ ಪುನಃ ಆರಂಭವಾಯಿತು. ನೀತಿಮಾರ್ಗವನ್ನು ಹುಡುಕುತ್ತ ಹೊರಟಿದ್ದವಳನ್ನು ವಿಧಿಯೇ ಅನೀತಿ ಪಥಕ್ಕೆ ನೂಕಿರುವಾಗ ಮನುಷ್ಯನೇನು ಮಾಡಲು ಸಾಧ್ಯ ಎಂದು ಮನಸ್ಸಿಗೆ ಸಮಾಧಾನ ಹೇಳಲ್ಯುದ್ಯುಕ್ತನಾದ. ವಿಧಿಯೆಲ್ಲಿಂದ ಬಂತು ? ಆಕೆಯನ್ನು ಒಂದು ಮೆಟ್ಟಲಿನಿಂದ ಇನ್ನೊಂದು ಮೆಟ್ಟಲಿಗೆ ಇಳಿಸುತ್ತ ಪಾಪಕೂಪಕ್ಕೊಯ್ಯುತ್ತಿರುವವರು ಸ್ವಾರ್ಥಾಂಧ ಪುರುಷರೇ ಆಗಿರುವಾಗ ಎಂದು ವಿವೇಚನೆಯು ಮರುನುಡಿಯಿತು. ಕಮಲೆಯಲ್ಲಿ ಒಂದು ತೆರನ ನಿಷ್ಕಾಮ ಪ್ರೇಮವು ಅವನಲ್ಲಿ ಉದಯಿಸಿತ್ತು. ಆದರ್ಶ ಸ್ವರೂಪದಲ್ಲಿ ಸ್ತ್ರೀಯನ್ನು ಕಾಣಬಲ್ಲ ಹಾಗೂ ಆ ಸ್ವರೂಪದಿಂದ ವ್ಯಕ್ತಿಯು ಮುಕ್ತಿಯನ್ನು ಸಾಧಿಸಬಲ್ಲ ಸತ್ವವೇ ಅವನ ಕರಗತವಾಗಿತ್ತೇನೋ ಎನ್ನುವಂತಿತ್ತು ಆದರೆ ಇಂದಿನ ನೋಟವು ಆ ಆಸೆಯನ್ನು ಮುರಿಯಿತು. ತನ್ನನ್ನು ಸಂಧಿಸಿಯೂ ಆಕೆಯು ಸುಧಾರಿ

ತಳಾಗಲಿಲ್ಲವಲ್ಲಾ-ದೋಷವು ನನ್ನದೋ ? ಸಾಕಷ್ಟು ಆತ್ಮಬಲವು ತನ್ನಲ್ಲಿಲ್ಲದಿದ್ದುದರಿಂದ ಆಕೆಯ ಮನವನ್ನು ನನ್ನೆಡೆಗೆ ತಿರುಗಿಸಲಾಗಲಿಲ್ಲವೆಂಬ ನಿರ್ಧಾರಕ್ಕೆ ಬಂದನು. ಮುಂದೇನು ಮಾಡಲಿ. ಈ ಸಮಸ್ಯೆ ಪೂರಣವಾಗುವವರೆಗೆ ಮನವು ಶಾಂತಿಯನ್ನು ಹೊಂದಲಾರದು. ಆಕೆಯನ್ನೇ ಇನ್ನೊಮ್ಮೆ ನೋಡಲಿ! ಅರಳಿದ್ದ ತಾಯ್ತನದ ಕರುಳನ್ನು ಕೆರಳಿಸಿ ಜೀವನದಾರ್ಶದ ಹೆಬ್ಬಾಗಿನ ಕಡೆ ನೋಡುವಂತೆ ಮಾಡಲೇ ಎಂಬೀ ತರಂಗ ತರಂಗವಾದ ಭಾವನೆಗಳಿಂದ ಮನಸ್ಸು ಗಡಿಯಾರದ ತೂಗು ತಟ್ಟೆ (Pendulum) ಯಂತೆ ಅತ್ತಿಂದಿತ್ತ ಉಯ್ಯಾಲೆಯಾಡಹತ್ತಿತು. ಬಹು ಕಾಲ ಚಿಂತಿಸಿದ ಬಗೆಹರಿಯದಾಯಿತು. ಕೊನೆಗೆ ' ಈಶ್ವರೇಚ್ಛೆಯಿದ್ದಂತಾಗಲಿ ' ಎಂದು ಕೋಟನ್ನು ಧರಿಸಿ ಕಮಲೆಯ ಮನೆ ಕಡೆ ಹೊರಟ.

ಆಗ ಸುಮಾರು ರಾತ್ರಿ ೧೦ ಘಂಟೆಯಿರಬಹುದು. ಬೀದಿಯಲ್ಲಿ ಜನಗಳ ಗಲಾಟೆಗೆಕಡಿಮೆಯೇನಿರಲಿಲ್ಲ. ದೊಡ್ಡ ಪಟ್ಟಣಗಳ ಈ ತೊಂದರೆಯನ್ನು ದೂಷಿಸುತ್ತ ಕಮಲಾಂಬಾ ಗೃಹದ ಬಳಿಗೆ ಬಂದು ನಿಂತು ಬಾಗಿಲನ್ನು ತಟ್ಟಿದನು. ಒಳಗಿನಿಂದ ಒಬ್ಬ ಮುದುಕಿ, ಪ್ರಾಯಶಃ ಮನೆಯ ಕೆಲಸಗಾತಿಯಿರಬಹುದು. ಪ್ರಯಾಸ ಪೂರ್ವಕವಾಗಿ ಬಂದು, ಮಾಧು ಕೇಳಿದ ಪ್ರಶ್ನೆಗೆ " ಅವರು ಈ ಮನೆ ಬಿಟ್ಟುಬಿಟ್ಟರು. ಎಲ್ಲಿಗೆ ಹೋದರೋ ಗೊತ್ತಿಲ್ಲ " ವೆಂದಳು. ಮಾಧುವಿನ ಮಿಕ್ಕೆಲ್ಲ ಪ್ರಶ್ನೆಗಳಿಗೂ ಬಂದುದಿಷ್ಟೇ ಉತ್ತರ. ಆಶ್ಚರ್ಯವೊಂದು ಕಡೆ. ಕೆಲಸಗಾತಿಯು ಸುಳ್ಳು ಹೇಳುತ್ತಿರ್ರುವಳೇ ಎಂಬ ಶಂಕೆಯೊಂದು ಕಡೆ. ಮೋಸಗಾತಿಯಾದಳಲ್ಲಾ ಕಮಲಾ ಎಂಬ ಕ್ರೋಧವೊಂದು ಕಡೆ. ಈ ಮಿಶ್ರಭಾವನೆಗಳಲ್ಲಿ ಮುಳುಗಿತೇಲುತ್ತ ಕ್ಲಬ್ಬನ್ನು ಸೇರಿದನು.

೬

ಮಾಧವರಾವ್, ಬಿ. ಎ., ಬಿ ಎಲ್. ಹೈಕೋರ್ಟ್ ಅಡ್ವೊಕೇಟ್, ಯವರ ಕೀರ್ತಿಯು ದಿನೇ ದಿನೇ ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಯಾಗುತ್ತಲಿತ್ತು. ಕೀರ್ತಿಯು ಬೆಳೆದಂತೆ, ಹಣವು ಕೈಸೇರಿದಂತೆ, ಮಾಧುವಿನ ತಲೆಯೂ ತಿರುಗಹತ್ತಲಿಲ್ಲ ವಿದ್ಯಾರ್ಥಿ ದೆಸೆಯಲ್ಲಿನ ಆದರ್ಶ ಜೀವನದ ಭಾವನೆಗಳೇ ಬಲಗೊಂಡು, ಒಂದೊಂದಾಗಿ ಕಾರ್ಯರೂಹನ್ನು ತಾಳುತ್ತಿ

ದ್ದವು. ವಯಸ್ಸಿನಲ್ಲಿ ಕಿರಿಯನಾದರೂ ವಕೀಲಿಯಲ್ಲಿ ಗಟ್ಟಿಗನೆಂದು ಹೆಸರು ಪಡೆದಿದ್ದನು. ಯಾವ ಸಾರ್ವಜನಿಕ ಸಂಸ್ಥೆ, ಸಭೆ ಚಳುವಳಿಯಲ್ಲಿಯೂ ಮಾಧುವೇ ಮುಂದಾಳು. ಸ್ತ್ರೀಯರ ಅಭ್ಯುದಯವನ್ನು ತ್ರಿಕರಣ ಪೂರ್ವಕವಾಗಿ ಆಶಿಸಿ ಅವರ ಪ್ರಯತ್ನಗಳಿಗೆ ಸಾಂತಃಕರಣದಿಂದ ಸಹಾಯ ಮಾಡುತ್ತಿದ್ದನನೆಂದರೆ ಮಾಧುವೆಂದು ಪ್ರಸಿದ್ಧಿಯಾಗಿದ್ದಿತು. ಒಂದು ದಿವಸ, ಎಂದಿನಂತೆ ಸಜ್ಜಿತನಾಗಿ, ಕೇಸಿನ ದಪ್ತರಗಳನ್ನು ಹಿಡಿದು ಮಾಧುವು ಕೋರ್ಟಿಗೆ ಹೊರಟ ಅದು ಅವನ ಜೀವನದ ಹೆಮ್ಮೆಯ ದಿವಸ. ಖೂನಿ ಆಪಾದಿತನೊಬ್ಬನ ವಕೀಲಿ ಮಾಡಿ ಅವನನ್ನು ನಿರ್ದೋಷಿಯೆಂಬ ಪ್ರಮಾಣ ಪೂರ್ವಕವಾಗಿ ತೋರಿಸಿದ್ದುದರ ಸಿರ್ಧರದ ವಿಜಯ ಮಾಲೆಯು ಅವನ ಕೊರಳಿಗೆ ಬೀಳತಕ್ಕದ್ದಿದ್ದಿತು. ವೇಷಭೂಷಿತನಾಗಿ ತಾಯಿಗೆ ನಮಸ್ಕರಿಸಲು 'ಮಾಧೂ ಪ್ರಾಣದಾನ ಮಾಡಿ, ಒಬ್ಬನನ್ನುಳಿಸಿದೆ. ಹೀಗೆ ಸಹಸ್ರಾರು ಪ್ರಾಣಗಳನ್ನುಳಿಸಿ ಕೀರ್ತಿವಂತನಾಗಿ ಬಾಳಪ್ಪಾ' ಎಂದು ಆಶೀರ್ವದಿಸಿದ್ದಳು. ಆ ಆನಂದದಲ್ಲಿ ಹಿಗ್ಗುತ್ತಾ ಕೋರ್ಟಿನ ಬಳಿಗೆ ಬಂದನು.

ಕೋರ್ಟಿನ ಮುಂದೆ ಜನಸಂದಣಿಯು ದಟ್ಟವಾಗಿ ನಿಂತಿತ್ತು. ವಿಚಾರಿಸುವಲ್ಲಿ ಒಬ್ಬ ಹೆಂಗಸು, ತಾನು ಕೆಲಸ ಮಾಡುತ್ತಿದ್ದವರ ಮನೆಯ ಮಗು ವೊಂದನ್ನು ಭಾವಿಗೆ ತಳ್ಳಿದ್ದಳೆಂದೂ, ಅವಳನ್ನು ವಿಚಾರಣೆಗಾಗಿ ತಂದಿರುವರೆಂದೂ ಗೊತ್ತಾಯಿತು. ಮಾಧುವು ಪ್ರಯಾಸದಿಂದ ದಾರಿ ಬಿಡಿಸಿಕೊಂಡು ಆಪಾದಿತಳ ಬಳಿಗೆ ಬಂದನು. ಜೀರ್ಣವಾದ ಸೀರೆ, ಹರಕು ರವಿಕೆಯನ್ನು ಧರಿಸಿ, ತಲೆಗೆ ಮುಸುಕನ್ನು ಹೊದೆದು ಆಕೆಯು ಕುಳಿತಿದ್ದಳು ಪಕ್ಕದಲ್ಲಿ ಮೃತ ಶಿಶುವಿನ ದೇಹ. ನೀರನ್ನು ಕುಡಿದು ಕುಡಿದು ಭಯಂಕರ ರೂಪನ್ನು ತಾಳಿದ್ದಿತು. ಅದರ ಪಕ್ಕದಲ್ಲಿ ತಾಯಿತಂದೆಗಳು ದೀರ್ಘ ರೋದನ ಮಾಡುತ್ತ ಕುಳಿತಿದ್ದರು. ಮಾಧುವು ಮಗುವನ್ನು ಪರೀಕ್ಷಿಸಿ ನೋಡಿ ತಂದೆತಾಯಿಗಳನ್ನು ಸಂತೈಸಿ ಆಪಾದಿತಳ ಕಡೆಗೆ ತಿರುಗಿದನು.

"ಅಮ್ಮ"

ಆಕೆಯು ಮುಖ ಎತ್ತಿ ನೋಡಿದಳು ತೆರೆದಾಲಿಗಳನ್ನು ಮಿಂಚಿ

ನಂತೆ ಮುಚ್ಚಿ ಮೊದಲಿನಂತೆ ಕುಳಿತಳು. ಮಾಧುವು ಆಪಾದಿತಳ ಗುರುತು ಹಿಡಿದನು. ಭಯಾಕ್ರಾಂತತೆಯಿಂದ ಆಕೆಯ ಬಳಿಗೆ ಸರಿದು

"ಕಮಲಾ...."

ಕಮಲೆಯು ತಲೆಯೆತ್ತಿ ನೋಡಿ

"ಅಣ್ಣಾ, ಕೊನೆಗೆ ಬಂದೆಯಾ" ಎಂದು ಚೀರಿ ಸ್ಮೃತಿ ತಪ್ಪಿದಳು.

ಮಾಧುವು ಕೋರ್ಟಿನ ನೌಕರರ ಸಹಾಯದಿಂದ ಆಕೆಯನ್ನು ಒಂದು ಕೋಣೆಗೆ ಕರೆದೊಯ್ದು ಶಿಶ್ರೂಷೆ ಮಾಡಿ

"ಕಮಲಾ, ಮಗುವಿನ ಕೊಲೆಗೆ ನೀನು ಹೇಗೆ ಕಾರಣ"

ಕಮಲೆಯು ಕಂಬನಿದುಂಬಿ ಮೆಲ್ಲಮೆಲ್ಲನೆ

"ಅದು ವಿಧಿಲಿಖಿತ. ನೀನವತ್ತು ಮದರಾಸಿನಲ್ಲಿ ಬಂದು ನನ್ನನ್ನು ನೋಡಿ ಹೃದಯದಲ್ಲಿ ಜ್ಞಾನದ ದೀವಿಗೆಯನ್ನು ನೆಟ್ಟುಹೋದೆ. ಸಂಧ್ಯಾ ಕಾಲದ ವೇಳೆಗೆ ಮನಸ್ಸಿನ ಸ್ಥಿತಿಯು ಬೇರೆಯಾಯಿತು. ಹತ್ತಿರವಿದ್ದ ಹಣ ಕಾಸು ನಗನಾಣ್ಯವನ್ನೆಲ್ಲಾ ದಾನಮಾಡಿ ಹೊಸ ಬಾಳನ್ನು ಆರಂಭ ಮಾಡಲು ಮಿಲ್ಲಿನಲ್ಲಿ ಕೆಲಸಕ್ಕೆ ಸೇರಿದೆ. ಅಲ್ಲಿನ ನೌಕರರ ಕಣ್ಣುಗಳು ಬೀಳುವಂತಾಗಲು ಆ ಸ್ಥಳವನ್ನು ಬಿಟ್ಟು ಒಬ್ಬರಲ್ಲಿ ಅಡಿಗೆಗೆ ಸೇರಿ ಮೊನ್ನೆ ಯವರೆವಿಗೂ ಇದ್ದೆ. ನನ್ನ ದುರದೃಷ್ಟ. ಅವರನ್ನು ವಿಧಿಯೇ ಬೆಂಗಳೂರಿಗೆ ಎಳತಂದಿತು. ಆ ಮಗುವನ್ನು ನನ್ನ ಪ್ರಾಣಕ್ಕಿಂತಲೂ ಹೆಚ್ಚಿನ ಪ್ರೀತಿಯಿಂದ ನೋಡಿಕೊಳ್ಳುತ್ತಲಿದ್ದೆ. ಇವತ್ತು ಬೆಳಿಗ್ಗೆ ಆಟವಾಡುತ್ತ ವಾಡುತ್ತ ಭಾವಿಯ ಬಳಿಗೆ ಹೋಯಿತು. ನಾನು ಹಿಡಿದುಕೊಳ್ಳುವುದಕ್ಕೆ ಹೋಗುವುದರಲ್ಲಿ ಒರಗಿದ್ದ ಇಟ್ಟಿಗೆಯು ಜಾರಿತು. ಮಗು ಭಾವಿಗೆ ಬಿದ್ದಿತು. ಮುಂದೇನು ಹೇಳಲಿ ನಾನೇ ನೂಕಿದಳೆಂದು ಇವರೆಲ್ಲರೂ..."

ಮಾಧುವು ಧೈರ್ಯ ಹೇಳಿ, ಆಕೆಯ ವಕಾಲತ್ತನ್ನು ವಹಿಸಿದ್ದನು. ವಿಚಾರಣೆಯೂ ಆಯಿತು; ಮಾಧುವು ಘಟನೆಯು ಆಕಸ್ಮಿಕವೆಂದು ತೋರಿಸಿ, ಆಪಾದನೆಯನ್ನು ಮುರಿದ. ಅವನ ವಾದ ಸರಣಿ-ಅವರ ಹಿಂದಿನ ಸ್ಫೂರ್ತಿ-ಅಂತಃಕರಣಗಳು ನ್ಯಾಯಾಧೀಶ ಮೊದಲ್ಗೊಂಡು ವಾದಿಗಳನ್ನು ಕೂಡ ಕಂಬನಿಯ ಕಾಲುವೆಯಲ್ಲಿ ಮಿಾಯಿಸಿಬಿಟ್ಟವು.

ಕೇಸಿನ ಪ್ರಕರಣ ಮುಗಿಯಿತು. ಕಮಲೆಯು ಮಾಧುವಿನ ಬಳಿಗೆ ಬಂದು ನಿಂತಳು. ಉಕ್ಕುತ್ತಿದ್ದ ಕೃತಜ್ಞತೆಯನ್ನು ಹೊರಸೂಸಬೇಕೆಂದು ಮನಸ್ಸಿನ ಆವೇಗ.

"ಅಣ್ಣಾ" ಎಂದಳು. ಹೆಚ್ಚಿಗೆ ಮಾತು ಹೊರಡದಾಯಿತು. ಅಳು ತಳುತ್ತ ಕಾಲ ಬಳಿ ಬಿದ್ದು ಬಿಟ್ಟಳು. ಮಾಧುವು ಆಕೆಯನ್ನು ಗಾಡಿಯಲ್ಲಿ ಕುಳ್ಳಿರಿಸಿಕೊಂಡು ಮನೆಗೆ ಹೊರಟ. ಸ್ವಲ್ಪ ವೇಳೆಯಾದ ನಂತರ ಕಮಲೆಗೆ ಎಚ್ಚರವಾಯಿತು. ಕಣ್ತೆರೆದಳು. ಮಾಧುವಿನ ಎದೆಯ ಮೇಲೆ ತನ್ನ ತಲೆಯೊರಗಿತ್ತು. ನಾಚಿ ಹಿಂದಕ್ಕೆ ಸರಿದಳು. ಮಾಧುವು ಮೃದುವಾಗಿ ನಕ್ಕನು. ಕಮಲೆಯು ಮಾತನಾಡಲು ಎರಡು ಮೂರು ಬಾರಿ ಪ್ರಯತ್ನಿಸಿ ಕೊನೆಗೆ ಸಾಹಸದಿಂದ,

"ನನ್ನನ್ನು ಎಲ್ಲಿಗೆ ಕರೆದೊಯ್ಯುತ್ತಿರುವಿರಿ?"

"ನಮ್ಮ ಮನೆಗೆ."

"ನಾನಲ್ಲಿ ಬರಲು ಅರ್ಹಳಲ್ಲ. ನನ್ನ ಬಾಳು........"

"ಅದನ್ನು ಮರೆತುಬಿಡು ಕಮಲಾ-ಹಿಂದಿನ ಬಾಳು ಎಂದೋ ಸುಟ್ಟುಹೋಯಿತು. ಅದರ ಯೋಚನೆ ಈಗೇತಕ್ಕೆ. ಈಗ ನಿನ್ನದು ಹೊಸ ಬಾಳು."

"ನಿಮ್ಮ ತಾಯಿಯವರು........"

"ಅದೇನೂ ಚಿಂತಿಸಬೇಡ. ಅವರಿಗೆ ಮದರಾಸಿನಲ್ಲಿ ನಡೆದದ್ದನ್ನು ಹೇಳಿಯೇ ಇರುವೆ. ನಿನ್ನನ್ನು ಬಿಟ್ಟುಬಂದದ್ದಕ್ಕೆ ನನ್ನ ಮೇಲೆ ಕೋಪಿಸಿ ಕೊಂಡರು."

"ಆ ತಾಯಿಯನ್ನು ನೋಡುವ ಧೈರ್ಯವೂ ನನಗಿಲ್ಲ?"........

"ಎಲ್ಲಾ ಉಂಟು ಕಮಲಾ, ಪುನಃ ಪುನಃ ಅದನ್ನೇ ಚಿಂತಿಸಬೇಡ. ಅಮ್ಮನಿಗೆ ಮಗಳೊಬ್ಬಳಿಲ್ಲವಲ್ಲಾ ಎಂಬ ಕೊರತೇ ಇದ್ದಿತು. ನೀನು ಬಂದದ್ದು, ಮಗಳು ಮನೆಗೆ ಬಂದ ಹಾಗಾಯಿತು. ಅವಳೂ ಹೀಗೆಯೇ ಅವತ್ತು ಹೇಳಿದ್ದು."

ಕಮಲೆಯು ಏನನ್ನೋ ಹೇಳಬೇಕೆಂದಿದ್ದಳು. ಆ ವೇಳೆಗೆ ಗಾಡಿಯು ಮಾಧುವಿನ ಮನೆಯ ಬಳಿ ಬಂದು ನಿಂತಿತು. ಮಾಧುವು ಕಮಲೆಯ

ಕೈ ಹಿಡಿದು ಒಳಕ್ಕೆ ಕರೆತಂದನು. ಬಾಗಿಲಿನ ಸಪ್ಪಳ ಕೇಳಿ ಮೀನಾಕ್ಷಮ್ಮನವರು ಹೊರಗೆ ಬಂದರು.

“ ಅಮ್ಮ, ನಿನಗೊಂದು ಭಿಕ್ಷೆ ತಂದಿರುವೆನು. ಕಮಲಾ.... ”

ಮೀನಾಕ್ಷಮ್ಮನವರ ಮುಖದ ಮೇಲೆ ತಾಯಿಯ ಒಲುಮೆಯು ಚಿಮ್ಮಿತು. “ ಬಾ-ತಾಯಿ. ” ಎಂದು ಕೈ ನೀಡಿದರು. ಕಮಲೆಯು ತಾಯಿಯ ಕಡೆಗೆ ಹಿಂದು ಮುಂದು ನೋಡುತ್ತ ಹೋಗುವ ತಪ್ಪಿತಸ್ಥಳರುವಿನಂತೆ ಮೀನಾಕ್ಷಮ್ಮನವರ ಬಳಿ ತೆರಳಿ ಅವರ ಎರಡು ಪಾದಗಳನ್ನೂ ಹಿಡಿದು ನಮಸ್ಕರಿಸಿದಳು. ಮೀನಾಕ್ಷಮ್ಮನವರ ಆನಂದಕ್ಕೆ ಪಾರವೇ ಇಲ್ಲ. ಕಮಲೆಯನ್ನೆತ್ತಿ ಬಿಗಿದಪ್ಪಿ “ ಚಿಂತಿಸಬೇಡ ಕಂದಮ್ಮಾ-ಆದದ್ದು ಆಗಿಹೋಯಿತು.—ದೇವರಿದ್ದಾನೆ. ಆವನನ್ನು ನಂಬಿ ಮುಂದೆ ಸರಿಯಾಗಿದ್ದರಾಯಿತು. ಹೆಣ್ಣು ಮಕ್ಕಳಿಲ್ಲವಲ್ಲಾಂತ್ತಿದ್ದೆ. ದೇವರೇ ನಿನ್ನ ಕೊಟ್ಟ ” ಎಂದನ್ನುತ್ತಾ ಒಳಕ್ಕೆ ಕರೆದೊಯ್ದರು.

ಮಾಧುವು ಅವರನ್ನೇ ದಿಟ್ಟಿಸಿ ನೋಡುತ್ತಾ, ನಿಟ್ಟುಸಿರು ಬಿಟ್ಟು “ ತಾಯಿಯೆಂದರೆ ಈಕೆಯೇ ತಾಯಿ. ಹೆತ್ತ ಮಕ್ಕಳಿಗೆ ಮಾತ್ರವಲ್ಲ ತಪ್ಪಿ ನಡೆದ ಮಕ್ಕಳಿಗೂ ತಾಯಿ ” ಎಂದುಕೊಂಡ.

---

# ಮುಂದೇನು ಗತಿ.

ವಾಚಕ ಭಗಿನೀ ಬಾಂಧವರೇ, ಇದು ನನ್ನ ಆತ್ಮಕಥೆ. ಸುಶಿಕ್ಷಿತಳಾಗಿದ್ದರೂ ಶಿಕ್ಷಣದ ಸತ್ವವನ್ನರಿಯದ ಒಬ್ಬ ಅಭಾಗ್ಯಳ ಚರಿತ್ರೆಯಿದು. ಸೀತಾ, ಸಾವಿತ್ರಿ, ದಮಯಂತಿ ಮೊದಲಾದ ಜಗಜ್ಜನನಿಯರ ಚರಿತ್ರೆಗಳನ್ನೋದಿ ಅವುಗಳಿಂದ ಸ್ಫೂರ್ತಿ ಪಡೆದಿರುವಿರಿ. ಅಂತಹ ನೀವಿಂದು, ದುರ್ಮಾರ್ಗಪ್ರವರ್ತಕಿಯೆನಿಸಿಕೊಂಡು, ತನ್ನ ಇಹಪರಸಾಧನಗಳನ್ನು ನಿರ್ಮೂಲ ಮಾಡಿಕೊಂಡ ಹತಭಾಗಿನಿಯೊಬ್ಬಳ ಶೋಕವೃತ್ತಾಂತವನ್ನೋದುವ ತೊಡಕಿಗೆ ಬಿದ್ದಿದ್ದೀರಿ. ಜನ್ಮಾರಭ್ಯ ಜನಗಳ ಧಿಕ್ಕಾರಕ್ಕೆ ಪಾತ್ರಳಾದ ನಾನು ಈ ನನ್ನ ಅಂತಿಮ ಕಾಲದಲ್ಲಿ ಕೂಡ ನಿಮ್ಮ ಮನವನ್ನು ಕಲುಷಿತ ಮಾಡಿ ದೋಷದ ಹೊರೆಯನ್ನು ಹೆಚ್ಚಿಸಿಕೊಳ್ಳಬೇಕೆಂದಲ್ಲ. "ನನ್ನ ದುಷ್ಟಜೀವನವು, ದುರ್ಮಾರ್ಗತನದ ಹಾದಿಯು ಕಷ್ಟಸುಖಗಳನ್ನು ಕನ್ನಡಿಸುವ ಕೈಮರವಾಗಲಿ, ನನ್ನ ಚರಿತ್ರೆಯಿಂದ ಎಚ್ಚರಗೊಂಡ ಆರ್ಯಬಂಧು ಭಗಿನಿಯರು ಸರಿಯಿಲ್ಲದ ಪಕ್ಷಕ್ಕೆ ತಮ್ಮ ಜೀವಿತಗಳನ್ನೂ, ನಡೆವಳಿಕೆಗಳನ್ನೂ ಸರಿಪಡಿಸಿಕೊಳ್ಳಲಿ" ಎಂಬ ಸದುದ್ದೇಶದಿಂದ ಈ ಅವಾಚ್ಯವಾದ ಆತ್ಮ ಕಥೆಗೆ ಕೈಹಾಕಿರುವೆನು.

ಭವಿಷ್ಯವನ್ನರಿಯುವ ಶಕ್ತಿಯನ್ನು ಪಡೆಯದಿದ್ದ ನನ್ನ ಜನನೀ ಜನಕರು ಮಮತೆಯಿಂದೆನಗೆ "ಸೀತಾ" ಯೆಂದು ಹೆಸರಿಟ್ಟರು. ನನ್ನ ಬಾಲಲೀಲೆಗಳಿಂದ ಹಿಗ್ಗುತ್ತಾ, ನನ್ನನ್ನಿತ್ತ ಪರಮಾತ್ಮನನ್ನು ನಿತ್ಯವೂ ಕೃತಜ್ಞತೆಯಿಂದ ವಂದಿಸುತ್ತಾ ಹರ್ಷದಿಂದ ಹೊತ್ತುಗಳೆಯುತ್ತಿದ್ದರು. ಇಂದವರು ತಮ್ಮ ಮುದ್ದು ಸೀತೆಯ-ತಮ್ಮ ದೈವಾಂಶಭೂತಳಾದ ಸೀತೆಯ-ತಮ್ಮ ಜೀವನ ಸರ್ವಸ್ವಳಾದ ಸೀತೆಯ ಸ್ಮರಣೆಯು ಕೂಡ ಪಾಪಕರವೆಂದೆಣಿಸಲಾರಂಭಿಸಿದ್ದಾರೆ. ಅದಾರ ತಪ್ಪು! ನನ್ನ ಪಿತನು ಮಧ್ಯಮ ವರ್ಗಕ್ಕೆ ಸೇರಿದವನಾಗಿ ನೂರು ರೂಪಾಯಿಗಳ ಮಾಸಾಶನವನ್ನು ತರುತ್ತಿದ್ದನು. ಇಪ್ಪತ್ತು ರೂಪಾಯಿಗಳ ಬಾಡಿಗೆ ಕೊಟ್ಟರೂ

ಗಣಸೆಗೆ ತಾರದೆ ನಾವು ಸುಖವಾಗಿ ಬಾಳುತ್ತಿದ್ದೆವು. ನನ್ನ ತಂದೆಯು ವಿದ್ಯಾವಂತನಾಗಿದ್ದರೂ ಆಚಾರ ವ್ಯವಹಾರಗಳಲ್ಲಿ ಪೂರ್ವಜರಿಗೆ ಯಾವ ವಿಧವಲ್ಲಿಯೂ ಅಗೌರವವನ್ನು ತರುತ್ತಿರಲಿಲ್ಲ. ಸ್ವಲ್ಪ ಕಟು ಧರ್ಮಿಯೇ ಆಗಿದ್ದನೆಂದರೂ ದೋಷವಿಲ್ಲ. ನನ್ನ ತಾಯಿಯು (ದೇವಾ! ಆ ಹೆಸರನ್ನುಚ್ಚರಿಸುವ ಯೋಗ್ಯತೆ ಕೂಡ ನನಗಿಲ್ಲವಲ್ಲಾ!) ನವ ನಾಗರಿಕ ಬಾಲಿಕೆಯರಂತೆ ಪಾಶ್ಚಿಮಾತ್ಯ ಪದ್ಧತಿಯ ಶಿಕ್ಷಣ ಘರ್ಷಣದಲ್ಲಿ ಸುರಿಯಲ್ಪಡದಿದ್ದರೂ, ತಕ್ಕಮಟ್ಟಿಗೆ ಸಂಸ್ಕೃತವನ್ನೂ, ಮಾತೃಭಾಷೆಯಾದ ಸಿರಿಗನ್ನಡವನ್ನೂ ಚೆನ್ನಾಗಿ ಬಲ್ಲವಳಾಗಿದ್ದಳು. ಕವಿಸಂತರ ಕೃತಿಗಳಲ್ಲಿ ನಾವು ಯಾವ ಆದರ್ಶವನಿತೆಯರ ಜೀವನಗಳನ್ನೋದಿ, ಅವುಗಳನ್ನು ಮನೋಸಾಮ್ರಾಜ್ಯದಲ್ಲಿ ಚಿತ್ರಿಸಲೆತ್ನಿಸುತ್ತೇವೆಯೋ ಅಂತಹ ಆದರ್ಶ ವನಿತೆಯೇ ನನ್ನ ಜನನಿಯು. ಆಕೆಗೆ ಪತಿಯೆಂದರೆ ಸಾಕ್ಷಾತ್ ಪರಮಾತ್ಮ ಸ್ವರೂಪು. ಪತಿಸೇವೆಯೆಂದರೆ ಅಖಂಡಾನಂದ ಸುಖ. ಇದರ ಕೀರ್ತಿಯು ನನ್ನ ಪಿತೃದೇವನಿಗೂ ಸೇರತಕ್ಕದ್ದೇ ಸಹಜ. ಆತನು ಒಮ್ಮೆಯಾದರೂ ಪತ್ನಿಯ ವಿಚಾರದಲ್ಲಿ ಬಿರುನುಡಿಗಳನ್ನಾಡಿದ್ದನ್ನಾಗಲೀ, ಪತ್ನಿಯನ್ನು ಹೀನವಸ್ತುವೆಂದು ಭಾವಿಸಿ ಅಪಚರಿಸಿದುದನ್ನಾಗಲೀ ನಾನು ಕಂಡುದಿಲ್ಲ. ಪತ್ನಿಯಲ್ಲಿ ಅಮಾನುಷವಾದಂತಹ ಪ್ರೇಮವನ್ನೂ ಗೌರವವನ್ನೂ ಪೋಷಿಸುತ್ತಲಿದ್ದನು. ತಾಯಿಯೆಷ್ಟು ಆದರ್ಶಮೂರ್ತಿಯಾಗಿದ್ದರೂ ಆ ಆದರ್ಶ ಜೀವನದ ಮರ್ಮವನ್ನೆನಗರುಹಿ, ಅವುಗಳನ್ನು ನಾನೂ ಕಾರ್ಯರಂಗದಲ್ಲಿ ತರುವಂತೆ ಶಕ್ತಿ ಸಂಚಯನ ಮಾಡುವುದನ್ನು ತಿಳಿಸದೆ ಹೋದಳು. ನನ್ನ ಅನ್ವರ್ಥ ನಾಮವನ್ನು ಸಾರ್ಥಕ ಮಾಡಿಕೊಳ್ಳುವ ಬಗೆಯನ್ನೆಲ್ಲಾ ತಿಳಿಸಿದಳು-ಆದರೇನು? ಆದರ್ಶರಂಗಕ್ಕೂ ನೈಜರಂಗಕ್ಕೂ ಅಂತರವುಂಟಲ್ಲ! ಪಿತನು ತನ್ನ ಸುಖವನ್ನು ಕೂಡ ನನಗಾಗಿ ತ್ಯಾಗ ಮಾಡಿ ಸಂಗೀತ ಶಿಕ್ಷಕನೊಬ್ಬನಿಗೆ ಹತ್ತು ರೂಪಾಯಿಗಳ ಮಾಸಾಶನ ವೀಯುತ್ತ ನನ್ನನ್ನು ಗಾನಪಟುವನ್ನಾಗಿ ಮಾಡಿದನು. ಯಾವ ಸತ್ಕರ್ಮಕ್ಕೂ ನನ್ನ ಅಮೂಲ್ಯವಾದ ಗಾನವಿದ್ಯೆಯನ್ನುಪಯೋಗಿಸಿಕೊಳ್ಳದೆ ಕೇವಲ ಇಂದ್ರಿಯಗಳ ಚಾಪಲ್ಯ ತೃಪ್ತಿಯ ಸಲುವಾಗಿ ಅದನ್ನು ದುರುಪಯೋಗ ಮಾಡಿ ದೂಷಿಸಿದ ಪಾತಕಿಯು ನಾನು! ಆರು ವರ್ಷಗಳ ವರೆಗೆ

ವೀಣೆಯಲ್ಲಿ ಶಿಕ್ಷಣ ಪಡೆಗಂತೆ ನೆನಪುಂಟು. ಅನಂತರ ನಾಲ್ಕೈದು ವರ್ಷಗಳು ಸ್ವಯಂ ಅಭ್ಯಸಿಸಿದಂತೆಯೂ ಜ್ಞಾಪಕವುಂಟು. ಅಂತೂ ವೀಣಾಗಾನದಲ್ಲಿ ಅಭಿಜ್ಞತೆಯನ್ನೇನೋ ಪಡೆದೆನು ಪಾರಮಾತ್ಮಿಕ ವಿಚಾರಗಳನ್ನು ನಿರ್ಲಕ್ಷಿಸಿ, ಪ್ರಾಪಂಚಿಕ ವ್ಯವಹಾರ ಲೋಲುಪರಾಗಿದ್ದ ಗೋಪಗೋಪಿಯರನ್ನು ಸುಧಾರಿಸಲೆಂತು ಭಗವಾನ್ ಕೃಷ್ಣದೇವನು ತನ್ನ ವೇಣುಗಾನವನ್ನೇ ಹೇಗೆ ಸಾಧನವಾಗಿ ಮಾಡಿಕೊಂಡನೋ ಹಾಗೆಯೇ ನಾನೂ ನನ್ನ ಗೆಳತಿಯರನ್ನು ಸುಧಾರಿಸಬಹುದಾಗಿತ್ತು. ಆತ್ಮ ಪಾವಿತ್ರ್ಯತೆಯನ್ನೇ ಪಡೆಯದ ಪಾಪಿನಿಯಾದ ನಾನು ಇತರರನ್ನು ಸನ್ಮಾರ್ಗಾವಲಂಬಿಗಳನ್ನಾಗಿ ಮಾಡುವುದು ಮೂರ್ಖತನವಲ್ಲವೇ ? ನನಗೆ ವಯಸ್ಸು ಹನ್ನೆರಡಾಗ ಬರಲು ತಾಯ್ತಂದೆಗಳು ವಧುವರ ವಿಕ್ರಯ ಸ್ಥಾನದಲ್ಲಿ ಬಹು ಹುರುಪಿನಿಂದ ಓಡಾಡ ಹತ್ತಿದರು. ತಮ್ಮ ಸಂಬಂಧವು ತಳಪದವಾಗಿರಲು ಪುನ್ನಾಗನಾದ ಜೀವ ಪತ್ತಿಗನನ್ನೆನಗೆ ಗೊತ್ತುಮಾಡಲಾಸಕ್ತರಾದರು. ತಾಯಿಗೆ ಐಶ್ವರ್ಯವಂತ ಅಳಿಯ ಬೇಕು, ತಂದೆಗೆ ವಿದ್ಯಾವಂತನು ಬೇಕು. ತಾಯಿಯ ದೃಷ್ಟಿಯಲ್ಲಿ ಅಳಿಯನ ಸಂಪತ್ತೇ ಸಕಲ ಸುಖಕ್ಕೂ ಮೂಲಕಾರಣ, ತಂದೆಯ ದೃಷ್ಟಿಯಲ್ಲಿ ವಿದ್ಯವೇ ಎಲ್ಲ ಹಿತಕ್ಕೂ ಮೂಲ. ಜೀವನ ಸಮರದ ಮುಖ್ಯಾಂಶವನ್ನೂ, ಈ ಕೃತ್ರಿಮ ರಂಗಮಂಟಪದಲ್ಲಿ ಪಾತ್ರಗಳನ್ನಭಿನಯಿಸುವ ನಟರ ಪ್ರಧಾನ ಗುಣಗಳನ್ನು ನಮ್ಮ ತಾಯ್ತಂದೆಗಳು ಮರೆತು ಅರಿಯದ ಎಡವಕ್ಕಿಗಳಾದ ನಮ್ಮನ್ನು ಯಾವಜ್ಜೀವನ್ನೂ ಖೇದಪಂಜರದಲ್ಲಿ ಹಾಕುವರಲ್ಲಾ ಅವರು ವ್ಯತಹೃದಯಿಗಳಲ್ಲವೇ—ಸ್ವಾರ್ಥಸಾಧಕರಾದ ಲಿಪ್ಸಿತರಲ್ಲವೇ—ಪ್ರೇಮರಹಿತರಾದ ಕ್ರೂರ ರಕ್ಕಸರಲ್ಲವೇ ? ಹೂವುಗಳೆಲ್ಲವೂ ನಾರಿನಿಂದ ಬಿಗಿಸಿ ಕಟ್ಟಲ್ಪಡದಿದ್ದಲ್ಲಿ ಅವುಗಳನ್ನು ಮುಡಿಯಲಾಗುವುದಿಲ್ಲವೆಂಬ ಸಣ್ಣಾಂಶವು ಅವರ ಗೋಚರಕ್ಕೆ ಬಾರದಲ್ಲ. ಪುರುಷನಲ್ಲಿ ದೇಹದಾರ್ಢ್ಯ, ಕ್ಷಪಣನು ತನ್ನ ಕೃಪಣ ಗುಣದ ಪ್ರಭಾವದಿಂದ ಶೇಖರಿಸಿಟ್ಟಿರುವ ಧನದಂತೆ ಶೇಖರಿಸಲ್ಪಟ್ಟಿರುವ ವೀರ್ಯ-ಇವುಗಳಿಲ್ಲದ ಮೇಲೆ ಅವನ ವಿದ್ಯಾ ಧನಗಳನ್ನೂ, ಅಂತರಂಗ ನೈರ್ಮಲ್ಯವೆಂಬ ಸೌಂದರ್ಯವನ್ನು ಪಡೆಯದೆ ಕೇವಲ ರಂಗುರಂಗಿನ ಬಾಹ್ಯ ಸೌಂದರ್ಯವನ್ನು ಪಡೆದಿರುವ ಸ್ತ್ರೀಯ ಲಾವಣ್ಯವನ್ನು

ಸುಡಬೇಕಲ್ಲದೆ ಮತ್ತೇನು ? ತಾಯ್ತಂದೆಗಳೇ ಗಮನಿಸಿರಿ-ನಿಮ್ಮ ಅಳಿಯ ನಾಗುವವನಲ್ಲಿ ವಿದ್ಯಾ, ಧನಗಳಿಗಿಂತಲೂ ಅಮೂಲ್ಯವಾದ ಪುರುಷಧನ ವಿದೆಯೇ ಇಲ್ಲವೋ ಗಮನಿಸಿ-ಅನಂತರ ಕುಮರಿಯರ ದಾನವನ್ನು ಆಲೋಚಿಸಿರಿ. ಹಾಗೆ ಮಾಡದೆ ನೀವೇ ಅವರನ್ನು ಭಯಂಕರವಾದ ಶೋಕಸಾಗರಕ್ಕೆ ತಳ್ಳಿ ಅನಂತರ ದೂಷಿಸಬೇಡಿರಿ

"ದೂರಕ್ಕೆ ಬೆಟ್ಟ ನುಣ್ಣಗೆ" ಎಂಬ ನಾಣ್ಣುಡಿಯು ಎಷ್ಟೋ ಆವರ್ತಿ ನಮ್ಮ ಅನುಭವಕ್ಕೆ ಬರುವುದು ಆದರೂ ತಿಳಿವು ಬಾರದಲ್ಲ! ಜನಸಾಮಾನ್ಯಕ್ಕೆ ಮಾನವ ಜೀವಿಗಳ ಪ್ರತಿ ಹೆಜ್ಜೆಯೂ ಸುಖಮಯವಾಗಿ ಕಂಡುಬರುತ್ತದೆ. ನಮ್ಮ ಹಿಂದೂ ಸಮಾಜೀಯರಿಗಂತೂ "ವಿವಾಹ"ವೆಂಬ ಗಹನವಾದ ವಿಷಯವೂ ಸರಳವಾದ ವೇದಾಂತದ ವಿಷಯವಾಗಿಯೇ ಕಂಡುಬರುತ್ತದೆ. ಆದರಾ ತತ್ವವು ನಿರ್ಭಾಗ್ಯ ಸೀತೆಯ ಜೀವನದಲ್ಲೇ ಶಾಪವಾಗಿ ಪರಿಣಮಿಸಬೇಕೇ ? ಮೋಕ್ಷವೆಂಬ ಅತ್ಯಮೂಲ್ಯವಾದ ಪದಾರ್ಥವನ್ನು ಆಶಿಸಿದವರಿಗೆ ನಿರ್ವಂಚನೆಯಿಂದ ಕೊಡುವ ಪರಮಾತ್ಮನಿಗೆ ನನ್ನ ತಾಯ್ತಂದೆಗಳ ಬಯಕೆಯನ್ನು ಈಡೇರಿಸುವುದು ಒಂದು ದೊಡ್ಡ ವಿಷಯವಾಗಲಿಲ್ಲ. ಇಬ್ಬರ ಆಕಾಂಕ್ಷೆಯೂ ಫಲಿಸಿತು. ಇಪ್ಪತ್ತು ಇಪ್ಪತ್ತೆರಡು ವರ್ಷ ವಯಸ್ಸಿನ ಸ್ವಾಮಿಯು ನನಗೆ ದ್ವಾದಶ ವರ್ಷದಲ್ಲೇ ಲಭಿಸಿದನು. ವಿವಾಹವಾದ ಒಂದೆರಡು ವರ್ಷಗಳಲ್ಲಿ ನಾನು ಪೂರ್ಣ ಸ್ತ್ರೀತ್ವವನ್ನು ಪಡೆದೆನು. ಕೆಲವು ಶಾಸ್ತ್ರ ವಿಧಿಗಳಾದವು. ಪತಿಗೃಹಕ್ಕೆ ನಾನು ತೆರಳಿದೆನು. ನಂದಗೋಕುಲದಂತಹ ಗೃಹ, ಪ್ರಣಯರತ್ನವೋ ಎನ್ನುವಂತಹ ಪತ್ತಿಗ, ಮಮತಾ ಮೂರ್ತಿಗಳೋ ಎಂದೆನಿಸುವ ಅತ್ತೆಮಾವಂದಿರು ಇಂತಹ ಸುಖಸಾಮ್ರಾಜ್ಯದ ಸವಿಯನ್ನು ತೋರಿಸಿ, ಅಲ್ಲಿನ ಸಾಮ್ರಾಜ್ಞಿ ಪಟ್ಟವನ್ನು ನನಗೆ ಕಟ್ಟಿ, ಒಮ್ಮೆಲೇ ಆಳವಾದ ಕೂಪಕ್ಕೆ ನನ್ನನ್ನು ತಳ್ಳಿದ ವಿಧಿಯನ್ನೆನಿತು ದೂಷಿಸಲಿ ! ನನ್ನ ಸ್ವಾಮಿಯ ವೇಷಭೂಷಣಗಳೆಲ್ಲವೂ ತೃಪ್ತಿಕರವಾಗಿಯೇ ಇದ್ದುವು. ಲಲಿತವಾದ ಗುಣ, ಸದಾ ನಗುಮೊಗ, ಎಲ್ಲರ ವಿಷಯದಲ್ಲಿಯೂ ಅಂತಃಕರಣ. ಆದರೆ ಕಹಿಯಾದ ಸತ್ಯ ಸಂಗತಿಯೇನೆಂದರೆ ಗುಪ್ತರೋಗವೆಂಬ ವಿಷವೃಕ್ಷದ ಬೇರೇ ನನ್ನ ಸ್ವಾಮಿಯು. ಅವರು ವಿದ್ಯಾವ್ಯಾಸಂಗದ ಸಲುವಾಗಿ ಮುಂಬಯಿಯಲ್ಲಿ ಮೂರು ವರ್ಷಗ

ಕಿದ್ದರೆಂದೂ, ಸ್ಯಾಲ್ವರ್ಸನ್ ಶಸ್ತ್ರ ಚಿಕಿತ್ಸೆಯು ಪರಿಚಯವು ಹಲವು ಬಾರಿ ಯಾಗಿತ್ತೆಂತಲೂ, ವೈದುನನು ಅಣ್ಣನ ಮೇಲೆ ಆಗ್ರಹಪಟ್ಟಾಗಲೆಲ್ಲಾ ಅನ್ನುತ್ತಿದ್ದುದು ನನ್ನ ಕಿವಿಗಳಿಗೆ ಬೀಳದಿರುತ್ತಿರಲಿಲ್ಲ. ಅಸಿತ ವರ್ಣ ವನ್ನು ಕೂಡ ಧವಳಛಾಯೆಯೆಂದು ನಂಬಿದ್ದ ನಾನೆಂತಹ ಮೂಢಳು! ಶೋಕ ನಗರದ ರಾಜ್ಞಿಯಾಗುವ ಭವಿಷ್ಯವು ನನ್ನ ಲಲಾಟದಲ್ಲಿ ಲಿಖಿತ ವಾಗಿದ್ದಾಗ ಈ ಗೃಹದಲ್ಲಿ ಇನ್ನೆಷ್ಟು ದಿನ ಎಡೆಯಿದ್ದೀತು. ಈ ಪ್ರೇಮ ನಿಕೇತನದಿಂದ ಇಂಗಡವಾಗುವ ಸಮಯವೊಮ್ಮೆ ಬಂದಿತು. ಸ್ವಾಮಿ ಗೃಹಕ್ಕೆ ಬಂದು ನಾಲ್ಕು ವರ್ಷಗಳು ಸರಿಯಾಗಿ ತುಂಬಿರಲಿಲ್ಲ. ಪೂರ್ಣ ಯೌವನ-ತಾರುಣ್ಯ-ದೇಹದ ಅಂಗಾಂಗಳಿಂದ ಸೂರ್ಯ ಕಿರಣಗಳಂತೆ ಹೊರಚಿಮ್ಮುತ್ತಿದ್ದ ಸೌಂದರ್ಯ-ಆಗಲೇ ನನ್ನ ಸಂಸಾರ ಸುಖದ ಸಂಧ್ಯಾ ಕಾಲವೂ ಹರಿಯಿತು. ಒಂದು ದಿನ ಮಧ್ಯಾಹ್ನ ಎರಡು ಘಂಟೆಯ ವೇಳೆಗೆ ನನ್ನ ಸ್ವಾಮಿಯು ಇಹಲೋಕದ ವ್ಯಾಪಾರವನ್ನು ತ್ಯಜಿಸಿದನು. **ಅಂದಿನಿಂದ ನಾನು ವಿಧವೆ**—ಅಂದರೆ ರೂಪವನ್ನು ಕುರೂಪ ಮಾಡಿಕೊಂಡು ಕತ್ತಲೆಯ ಕೋಣೆಯಲ್ಲಿ ವಾಳಸಗಿತ್ತಿಯಾಗಿ ನೊಂದು ಬೆಂದು ಸರ್ವರ ಧಿಕ್ಕಾರಕ್ಕೂ ಪಾತ್ರಳಾಗಿ, ಸಮಾಜದ ಅಮಂಗಳದ ಕುರುಹಾಗಿ ನಿಲ್ಲುವ ಒಂದು ಕ್ಷುದ್ರ ಜಂತು. "ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ" ಎಂದು ಹಾಡಿದ ಮನುದೇವನಿಗೆ ಜನನವಿತ್ತ ಭಾರತ ವರ್ಷ ದಲ್ಲಿ ವಿಧವೆಯೆಂದರೆ ವಿಕರ್ಷಣೆಯನ್ನೂ, ಅಸಹ್ಯತೆಯನ್ನೂ ಹುಟ್ಟಿಸುವ ವಸ್ತು! ಭಾರತ ಬಂಧುಗಳೇ-ಯಾವಾವ ಸೂತ್ರಗಳನ್ನು ಸೀವಾಚರಿಸಲಾರಿರೋ, ಯಾವ ಯಾವ ಸಾಧು ಸಂತರ ಸಜ್ಜೀವನವನ್ನನುಸರಿಸಲಾರಿರೋ ಅವರ ಗೋತ್ರಜರೆಂದೂ ಹೇಳಿಕೊಳ್ಳಲು ನಿಮಗೆ ಯಾವ ಹಕ್ಕಿದೆ. ನೀಚಭಾವ ನೀಚನಡತೆಗಳೆಂಬ ಮಾಯಾ ಮೋಹ ಜಾಲದಲ್ಲಿ ಬಿದ್ದು ಅಗ್ನಿ ತಪ್ತವಾದ ಪತಂಗದಂತೆ ತತ್ತರಿಸುವ ಕ್ಲೀಬರಾದ ನೀವು ನಮ್ಮ ನೀತಿ ನಡವಳಿಕೆಗಳ ಮೇಲೆ ನ್ಯಾಯ ತೀರ್ಪಿಗೆ ಕುಳಿತುಕೊಳ್ಳುತ್ತೀರಾ! ಸ್ತ್ರೀಯರೆಂದರೆ ಉಪಭೋಗ ಮತ್ತು ಸೇವಾ ವಸ್ತುಗಳೆಂದು ಭಾವಿಸಿ, ಅವರ ಜ್ಞಾನದ ಕೆದಿಯನ್ನು ವಿಕಾಸ ಮಾಡಿದಲ್ಲಿ ಪುರುಷರಿಗೆ ಪ್ರಧಾನ್ಯ ವೆಲ್ಲಿ ತಪ್ಪುವುದೋ ಎಂಬ ಸ್ವಾರ್ಥ ಧ್ಯೇಯದಿಂದ ಆವೃತರಾಗಿರುವ

ನೀವು ನಮಗೆ ಧರ್ಮಕರ್ಮಗಳ ಮಾರ್ಗವನ್ನು ತೋರಿಸುವ ಗುರುಗಳೇನು ?

ನನ್ನ ವೈಧವ್ಯ ಕಾಲದಲ್ಲನುಭವಿಸಿದ ಕಾಯ, ಮನೋಕ್ಲೇಶವನ್ನು ವರ್ಣಿಸಹತ್ತಿದರೆ ಭವಭೂತಿ ಕವಿಯು ಹೇಳುವಂತೆ “ ಅಪಿಗ್ರಾವಾವ ರೋದತಿ ” ಎಂಬ ಉಕ್ತಿಯು ನೈಜರಂಗದಲ್ಲಿಳಿದು ನಮ್ಮನುಭವಕ್ಕೆ ಬರುವುದರಲ್ಲಿ ಸಂದೇಹವಿಲ್ಲ. ಬೇಡ ಬೇಡ ! ನನ್ನನ್ನಿಂತಹ ಕ್ಲೇಶ ಕೂಪಕ್ಕೆ ನೂಕಿದ ಶತ್ರುಗಳಿಗೂ ಬೇಡವೀ ಚಿತ್ರಹಿಂಸೆ......

ನನ್ನ ಪತಿಯು ಪರಲೋಕಕ್ಕೆ ಪ್ರವಾಸ ಹೊರಟ ಕೆಲವು ದಿವಸಗಳಿಗೇ ನಾನು ಮಾತೃಗೃಹಕ್ಕೆ ಪುನಃ ಪ್ರವೇಶಮಾಡಿದೆ—ಗೃಹವನ್ನು ಬೆಳಗಿಸುವ ಗೃಹಲಕ್ಷ್ಮಿಯಂತಲ್ಲ - ಅಮಂಗಳ ಭೂತದಂತೆ—ಕೂಳಿನ ಯಾಚಕಳಂತೆ ! ಯಾವ ಗೃಹದಲ್ಲಿ ನಾನೊಮ್ಮೆ ತಾವರೆ ಕೊಳದ ಏಕಮಾತ್ರ ಕಮಲ ಪುಷ್ಪದಂತಿದ್ದೆನೋ, ಅಲ್ಲಿ ಈಗ ಕೊಚ್ಚೆಯಲ್ಲಿ ಬಿದ್ದ ತರಗೆಲೆಯಂತಾದೆನು. ತಾಯಿಯು ನನ್ನನ್ನು ಕಂಡೊಡನೆಯೇ ರಾಗರಾಗವಾಗಿ ಅಳುವುದಕ್ಕಾರಂಭಿಸುತ್ತಿದ್ದಳು. ತಂದೆಯು ನಿದ್ರಾಹಾರಗಳನ್ನು ತೊರೆಯುತ್ತ ಬಂದನು. ಈ ಸುಟ್ಟ ಮೋರೆಯ ದರ್ಶನದಿಂದ ಅವರಿಗೇಕೆ ದುಃಖೋತ್ಪನ್ನವಾಗಕೆಂದಾಲೋಚಿಸಿ ನಾನು ಕೊಠಡಿಯಿಂದ ಹೊರ ಬರುವುದನ್ನೇ ಬಿಟ್ಟೆನು. ಮನಕ್ಕೆ ಶಾಂತಿದೊರೆತಾಗ ವೀಣೆಯನ್ನೆತ್ತಿ ದಿವ್ಯ ದಾಸರಾಯರ ಮತ್ತು ಭಕ್ತಕವಿಕುಲ ತ್ಯಾಗರಾಜನ ಕೀರ್ತನೆಗಳನ್ನು ಬಾರಿಸುತ್ತಿದ್ದೆನು. ಮೊದಲು ಯಾವ ಕೀರ್ತನೆಗಳ ಆಂತರ್ಗಿಕವಾದ ರ್ಥವು ನನಗನವಶ್ಯಕವಾಗಿ ತೋರುತ್ತಿದ್ದಿತೋ ಈಗವುಗಳೇ ನನ್ನಂತಸ್ತಾಪವನ್ನಡಗಿಸುವ ಅಮೃತ ಕುಂಭಗಳಾದವು. ಮೊದಲು ಸಂಗೀತ ಶಾಸ್ತ್ರದ ಮೇಲೆ ಹೆಚ್ಚುಗಮನವಿತ್ತು-ಮೊದಲು ಸಂಗೀತವೇ ಸರ್ವವೂ ಆಗಿತ್ತು. ಅದೇ ಗಮನ ಸ್ಥಾನವಾಗಿತ್ತು. ಈಗದು ಒಂದು ದಿವ್ಯವಾದ ಗುರಿಯನ್ನು ಯೋಚಿಸಿದ ಸಾಧನವಾಯಿತು. ನಾನು ವೀಣೆಯನ್ನು ಬಾರಿಸಿದೆನೆಂವರೆ ಗೃಹದವರ ಹೃದಯಗಳನ್ನು ಗರಗಸದಿಂದ ಕೊಯ್ದಂತಾಗುತ್ತಿದ್ದಿತಂತೆ ! ಹಾಯ್ ಹಾಯ್ !! ನನ್ನನಾಶ್ರಯಿಸಿದ ಗಾಯನಕ್ಕೂ ಇಂತಹ ಪರಿಣಾಮವೇ ? ಎಲ್ಲರೂ ಮಲಗಿ ನಿದ್ರಿಸುತ್ತಿರುವಾಗ ನನ್ನ ಹೃದ

ಯದ ತೃಷೆಯನ್ನಾರಿಸಿಕೊಳ್ಳಲು ಯತ್ನಿಸುತ್ತಿದ್ದೆ. ನನ್ನನ್ನು ಪೋಷಿಸಿದ ಅಜ್ಜಿಯೇ ನನ್ನ ಮೇಲೆ ಕತ್ತಿಹಿರಿದು ನಿಂತಳು. "ಮದ್ವೆಯಾದ ಮೂರ್ವರ್ಷದ್ವಳ್ಗಾಗಿ ಗಂಡನ್ನುಂಡಿಗಿಕ್ಕಿ ತಿಂದ್ಕೂತ ಹೆಮ್ಮಾರೀಗೆ ವೀಣೆಯೊಂದು ಕೇಡು-ವೀಣೆ"-ಇದು ನಿತ್ಯಗಾಯನದ ಪಲ್ಲವಿ ನುಡಿಯಾಯಿತು. ಆಕೆಯನ್ನೆದುರಿಸಲು ನನ್ನ ತಾಯಿಗೆ ಭೀತಿ-ಏತಕ್ಕೆಂದರೆ ಅತ್ತೆಯ ಬಗ್ಗೆ ಗೌರವ. ತಂದೆಗಾದರೋ ಅಗಾಧವಾದ ಮಾತೃಪ್ರೇಮ- ಈ ಭೀತಿ ಭಕ್ತಿಗಳ ನಡುವೆ ನಾನು ಸಿಕ್ಕಿಕೊಂಡು ನರಳಬೇಕಾಯಿತು. ನನ್ನ ಮನದ ಉಲ್ಲಾಸ, ಉತ್ಸಾಹಗಳು ಕ್ಷಯಿಸಿದ್ದ ಈ ನಿಕಟವೇಳೆಯಲ್ಲಿ ಕೂಡ ನನ್ನ ಧ್ವನಿಯಾಗಲೀ, ವೀಣೆಯನ್ನು ಬಾರಿಸುವ ಪಟುತ್ವವಾಗಲೀ ಕುಂದದಿದ್ದುದು ಪರಮಾಶ್ಚರ್ಯವೆನಿಸುತ್ತಿತ್ತು !!!

ನನ್ನ ಗಾಯನವು ಮನೆಮಂದಿಗೆಲ್ಲಾ ಅಸಹನೀಯವಾಗಿದ್ದರೂ ನೆರೆಮನೆಯ ಒಂದು ವ್ಯಕ್ತಿಗೆ ಪರಮಾಹ್ಲಾದಕರವಾಗಿದ್ದಿತು. ಉದ್ದಿಷ್ಟ ಸ್ಥಾನವನ್ನು ಸೇರುವೆವೆಂಬ ಧೈರ್ಯದಿಂದ ಹೊರಡುವ ಪ್ರಯಾಣಿಕರನ್ನು ಮಂದಮಾರುತವು ನಿರಾಶರನ್ನಾಗಿಸಿ, ನೌಕೆಯನ್ನು ತುಮುರು ತುಮುರು ಮಾಡಿ, ಒಬ್ಬೊಬ್ಬರನ್ನೊಂದೊಂದು ಕಡೆಗೊಯ್ಯುವಂತೆ, ಪ್ರಾಪಂಚಿಕ ಜೀವನವೆಂಬ ನೌಕೆಯಲ್ಲಿ ಪ್ರಯಾಣ ಮಾಡುತ್ತಿದ್ದ ನನ್ನನ್ನು ವಿಧಿಯು ಹೋಗಬಾರದಂತಹ ಒಂದೆಡೆಗೆ ಕರೆದೊಯ್ದಿತು. ಹೃದಯವು ಉನ್ನತ ಭಾವಗಳನ್ನು ಬಹಿಷ್ಕರಿಸಿ ತುಚ್ಛವಾದ ಭಾವಗಳನ್ನು ಪುನ್ನಿಸಲಾರಂಭಿಸಿತು. ಹೆಚ್ಚೇನು! ನೀತಿ, ಜಾತಿ, ಮಾನ, ಧನಗಳೊಂದನ್ನೂ ಪರಿಗಣಿಸದೆ ಒಬ್ಬ ಕುಜನಲ್ಲಿ ಅನುರಕ್ತಳಾದೆನು ಅವನೇ ನನ್ನ ಭವಿಷ್ಯತ್ ಮನೋವಲ್ಲಭ-ನೆರೆಮನೆಯ ರಸಿಕ. ಆತನು ಬೇಡರ ಕುಲದವನು-ಐತಿಹಾಸಿಕ ಮನೆತನಕ್ಕೆ ಸೇರಿದವನು-ಅಂತೇ ೯೦ ರೂಪಾಯಿಗಳ ಗೌರವ ಮಾಸಾಶನವು ಘನ ಸರ್ಕಾರದಿಂದ ದೊರೆಯುತ್ತಿತ್ತು. ತನ್ನ ಹೆಂಡತಿಯು ಮೃತಪಟ್ಟಳೆಂದು ಎಲ್ಲರೊಂದಿಗೂ ಹೇಳಿಕೊಳ್ಳುತ್ತಾ ತಾನೊಬ್ಬನೇ ವಾಸಿಸುತ್ತಿದ್ದನು. ಆದರದು ಸಟೆಯೆಂದೂ, ಹೆಂಡತಿಯು ಚಿಕ್ಕಬಳ್ಳಾಪುರದಲ್ಲಿ, ಜೀವಂತಳಾಗಿ ತಂದೆಯ ಮನೆಯಲ್ಲಿದ್ದಾಳೆಂದೂ ಅನಂತರ ತಿಳಿಯಲ್ಪಟ್ಟಿತು. ಈ ನಾಯಕ ಪ್ರಭೃತಿಗೆ ಬರುತ್ತಿದ್ದ ವೇತನವು ಒಂದು ವಾರದ ಮೇಲು ಖರ್ಚಿಗೆ ಸಾಲ

ತ್ತಿರಲಿಲ್ಲ. ಜೀವನ ಯಾತ್ರೆಗೂ, ದುಂದು ವೆಚ್ಚಕ್ಕೂ ಕಂಡಕಂಡೆಡೆಯ ಲ್ಲೆಲ್ಲಾ ಸಾಲ. ಪಿತ್ರಾರ್ಜಿತವಾದ ಅಲ್ಪ ಆಸ್ತಿಯು ಹಲವು ವ್ಯಾಪಾರಗಳಲ್ಲಿ ಹಾಳಾಯಿತು. ಮೊದಲು ಫ್ಯಾನ್ಸಿ ಸಾಮಾನಿನ ಅಂಗಡಿಯಾಯಿತು-ಅನಂ ತರ ಕುದುರೆ ಗಾಡಿಯನ್ನಿಟ್ಟು ಬಾಡಿಗೆಯಿಂದ ಹಣವನ್ನು ಸಂಪಾದಿಸಿ ಯಾಯಿತು-ಮನೆಗಳ ಕಂಟ್ರಾಕ್ಟಾಯಿತು-ಮುದ್ರಣಾಲಯವಾಯಿತು. ಸಂ ಪಾದನೆಯ ಫಲಿತಾಂಶವೇನಾಯಿತೆಂದರೆ ಜನ್ಮಜನ್ಮಕ್ಕೂ ತೀರಿಸಲಾಗ ದಂತಹ ಸಾಲದ ಹೊರೆ. ಈ ಅಂತರಂಗ ವಿಚಾರಗಳು ನನಗೆ ಮೊದಲೇ ತಿಳಿದಿದ್ದ ಪಕ್ಷಕ್ಕೆ ಈ ಆತ್ಮ ಕಥೆಯ ರೀತಿಯೇ ಬೇರೆಯಿರುತ್ತಿತ್ತು. ಆದ ರೇನು ನೋಡಲಿ-ಜನರಂತೆ ನಾನೂ ಮರುಳು ಹೋದೆ-ನಾಯಕನ ಸುಂದ ರಾಕೃತಿ; ರಸಿಕತನದ ಪರಕಾಷ್ಠ ದೆಸೆಯನ್ನು ಸೂಸುತ್ತಿದ್ದ ಹಾವಭಾವ ವಿಲಾಸಗಳು. ರೂಹಿಗೊಪ್ಪುವ ವೇಷಭೂಷಣಗಳು, ಚಮತ್ಕಾರವಾದ ಮಾತುಗಳು. ನನ್ನ ಶೋಕಕ್ಕಾಗಿ ಅಂತಃಕರಣ ಪೂರಿತವಾಗಿ ತೋರು ತ್ತಿದ್ದ ವಿಷಾದತೆಗಳಿಗೆ ಮನಸೋತೆ.

ನನ್ನ ಸಂಗೀತವು ಈತನಿಗೆ ಪರಮಾದರಣೀಯವಾಗಿತ್ತೆಂದು ಕಾಣು ತ್ತದೆ. ನಡು ರಾತ್ರಿಯಾಗಲೀ ಚಿತ್ತೈಕಾಗ್ರತೆಗೆ ಭಂಗ ತರುತ್ತಿರಲಿಲ್ಲ. ನಾನು ಹಾಡದಿದ್ದ ಮಾರನೆಯ ದಿನ ಆತನ ಮುಖವು ಕಾಂತಿಹೀನವಾಗಿರು ತ್ತಿತ್ತು. ದೈನ್ಯಭಾವವು ಬಂದು ಕಂಗಳನ್ನು ಆವರಿಸುತ್ತಿತ್ತು. ಈ ವರ್ತ ನೆಯು ಮಾನವನು ಮಾನವನಿಗಾಗಿ ಪಡತಕ್ಕ ನಿಷ್ಕಾಮಪ್ರೇಮದ ಫಲವಲ್ಲ; ಪರರ ದುಃಖದಲ್ಲಿ ಭಾಗಿಯಾಗಿ, ದುಃಖ ನಿವಾರಣೆಗಾಗಿ ಪ್ರಯತ್ನಿಸುವ ಸದುದ್ದೇಶವಲ್ಲ; ಪರರುಮ್ಮಳಿಕೆಗಳಿಗೆ ಉಪಶಮನವನ್ನು ಸೂಚಿಸಿ ಈಶನಿಗಾಗಿ ಅವರನ್ನು ಹರ್ಷಚಿತ್ತರನ್ನಾಗಿಸಬೇಕೆಂಬಾ ದಿವ್ಯ ಆಕಾಂಕ್ಷೆಯಲ್ಲ.—ಮತ್ತೆ—ನನ್ನ ರೂಪ. ಅವನ ಸರ್ವಾಂಗಗಳಲ್ಲಿ ತುಂ ಬಿದ್ದ ನೀಚತಮವಾದ ಕಾಮೇಚ್ಛೆ!!-ಹೆಚ್ಚೇನು-ವಿಷವು ವಿಷಪಾತ್ರೆ ಯನ್ನೇ ಸೇರಿತು-ನಮ್ಮ ಹೃದಯಗಳು ಒಂದಾದುವು-ಕೌಶಲದಿಂದ ಬರೆದ ಚಿತ್ರವು ಮಸಿಯ ಪಾಲಾಯಿತು-ಹಿಂದೂಧರ್ಮದ ಸುವರ್ಣಶೃಂಖಲೆಗ ಳನ್ನು ಕಿತ್ತೊಗೆದು, ಹೃದಯದಲ್ಲಡಕವಾಗಿದ್ದ ಪತಿಪತ್ನಿಯ ಆದರ್ಶ ಭಾವಕ್ಕೆ ದಹನ ಸಂಸ್ಕಾರವನ್ನು ಮಾಡಿದೆ. ಹಿಂದೂ ಉತ್ಪಲಾಕ್ಷಿಯರ

ಪಾತಿವ್ರತ್ಯವೆಂಬ ಕಲ್ಪನೆಯ ಮೌಢ್ಯವನ್ನು ಹೊರ ತೋರಿದೆ. ಸಮಾಜವೇ, ಇದಕ್ಕಾಗಿ ನೀನು ನನ್ನನ್ನು ಶಪಿಸುವಿಯಲ್ಲವೇ-ಶಪಿಸು, ಶಪಿಸು. ನಿನ್ನ ಶಾಪದಲ್ಲಿಯೇ ನೀನು ಹಾಳಾಗುವಿ !!

ನೆರೆಯುವನೆಂದು ನಾನಿದುವರೆಗೆ ಯಾವನನ್ನು ಸಂಬೋಧಿಸುತ್ತಿದೆನೋ ಅವನನ್ನು ಇನ್ನು ಮುಂದೆ "ಪ್ರಿಯ"ನೆಂದು ಸಂಬೋಧಿಸುವೆನು. ನನ್ನ ಸಾಮಾಜಿಕ ಬಂಧನದ ಪರಿಸ್ಥಿತಿಯು ಪ್ರಿಯನೊಂದಿಗೆ ಸರಸ ಸಲ್ಲಾಪಗಳನ್ನಾಡಿ, ಕೆಲಕಾಲವಾದರೂ ನಲಿಯಲು ಅನುಕೂಲವಾಗುತ್ತಿರಲಿಲ್ಲ. ನನ್ನ ಮನದ ದುಗುಡವನ್ನು ನಿವಾರಿಸಲು ಪ್ರಿಯನೊಂದು ದಿನ "ಸೀತೂ, ನನ್ನರಗಿಣಿ, ಪಾಂಡಿಚೆರಿಯಲ್ಲಿ ನಾವಿಬ್ಬರೂ ಸಂಸಾರ ಹೂಡೋಣ ಬರುವೆಯಾ" ಎಂದನು. ನನಗೆ ಸುಖ ಸ್ವರ್ಗದ ಹಾದಿಯು ಪುನಃ ತೆರೆಯಿತೆಂದು ಭಾವಿಸಿದೆನು. ಪ್ರಿಯನ ಸ್ವಾರ್ಥತ್ಯಾಗ ಬುದ್ಧಿಗೆ ಮನದಣಿಯ ಮಣಿದೆನು. ತನಗೆ ಹತ್ತು ಸಹಸ್ರ ರೂಪಾಯಿಗಳಿಗೆ ಕಮ್ಮಿಯಿಲ್ಲದ ಆಸ್ತಿಯಿರುವುದೆಂಬಭಿಪ್ರಾಯವನ್ನು ಮನದಲ್ಲಿ ಮೂಡಿದ್ದನು.-ಜೊತೆಗೆ ನಿರ್ಬಾಧಕವಾಗಿ ಇದ್ದಸ್ಥಳಕ್ಕೆ ಬರುವ ತೊಂಬತ್ತು ರೂಪಾಯಿಗಳ ಮಾಸಾಶನ-ಇನ್ನೇನು ? ಮುಂದೆಲ್ಲಾ ಸುಖ-ಆನಂದ-ಸ್ವರ್ಗ ! ಹಾ ! ಆದರದು ಕೇವಲಭ್ರಾಂತಿಯಾಗಬಹುದೇ-ನೀರ್ಗುದುರೆಯಾಗಬಹುದೇ ?

ನಮ್ಮ ನಿರ್ಣಯವು ಫಲಕಾರಿಯಾಯಿತು. ಹತಭಾಗಿನಿಯಾದ ನಾನು ನನ್ನ ಸುಖವೇ ಹಿರಿದೆಂದು ನಂಬಿ, ನನಗಾಗಿ ತಮ್ಮ ಸರ್ವಸ್ವವನ್ನೂ ಧಾರೆಯೆರೆದಿದ್ದ ದೈವತಾ ಮೂರ್ತಿಗಳಾದ ತಾಯ್ತಂದೆಗಳನ್ನು ಧಿಕ್ಕರಿಸಿ ಪಾಪ ಕೂಪದಲ್ಲಿ ಧುಮ್ಮಿಕ್ಕಿದೆ. ಪ್ರಿಯನೊಂದಿಗೆ ಪಾಂಡಿಚೇರಿಗೆ ತೆರಳಿದೆ. ಸಂಸಾರ ಮಾಡತೊಡಗಿದ ಒಂದು ವರ್ಷಕ್ಕೇ ಪಾಪಿನಿಯುರಗ್ರಜಳಾದ ನನ್ನ ಗರ್ಭದಿಂದ ಪಾಪರಹಿತವಾದ ಶಿಶುರತ್ನವೊಂದು ಜನಿಸಿತು. ದೇವಾ ! ಶಿಶುವೇನೆನಗೆ ಶೂಲದಿರಿತವೋ-ಸದ್ವರವೋ. ನನ್ನ ಪಾಪ ನಡೆವಳಿಕೆಯೇ ಶಿಶುರೂಪವನ್ನು ತಾಳಿ ಜಗತ್ತಿಗೆ ಬಂದಿತೋ. ನನ್ನ ನಡತೆಯ ಶಿಕ್ಷೆಯನ್ನನುಭವಿಸಲು ಕಠಿಣಾತ್ಮ ಈ ಪ್ರಪಂಚಕ್ಕೆ ನಿರ್ಮಲವಾದ ಈ ಕಂದಮ್ಮನನ್ನಟ್ಟಿದೆಯಲ್ಲಾ ! ನೀನು ಕರುಣಾಮಯನೇ, ನಿಷ್ಪಕ್ಷಪಾತ ನ್ಯಾಯಾಧೀಶನೇ. ಹಾಗಾದರೆ ನನ್ನ ವಿಚಾರದಲ್ಲೇತಕೀ ಪಕ್ಷಪಾತ ?

ಕಾಲಕ್ರಮೇಣ ನನ್ನ ಪ್ರಿಯನ ವಿಚಾರಗಳೆಲ್ಲಾ ಒಂದೊಂದಾಗಿ ಬೆಳಕಿಗೆ ಬರಲಾರಂಭಿಸಿತು. ಅವನು ಪಾಂಡಿಚೆರಿಗೆ ಬಂದದ್ದು ಸಿವಿಲ್ ತುರಂಗಗಳನ್ನು ತಪ್ಪಿಸಿಕೊಳ್ಳಲಿಕ್ಕೆಂದು ನನಗೆ ತಿಳಿಯದಿರಲಿಲ್ಲ. ಕನಸಿನ ಜಗತ್ತಿನಲ್ಲಿ ಸುಖಮಯವಾದ ಭಾವನಾ ತರಂಗಗಳಿಗೆ ಸಿಲುಕಿ ಜಲಕೇಳಿಯನ್ನಾಡುವ ನವವಧುವರರಂತಿದ್ದ ನಮ್ಮ ಮನಸ್ಸಿಗೆ ಎಲ್ಲವೂ ಹರ್ಷಮಯವಾಗಿಯೇ ಇದ್ದಿತು. ಆನರೆ ವಾಸ್ತಾವಿಕ ಪ್ರಪಂಚದ ಕ್ರೂರಾಂಬುಗಳ ಪರಿಚಯವಾಗಲಾರಂಭಿಸಿದ ಮೇಲೆ ಅಭಿಪ್ರಾಯಗಳು ಪರಿವರ್ತನ ಹೊಂದುತ್ತಾ ಬಂದುವು. ಪ್ರಿಯನು ಪುನಃ ವ್ಯಾಪಾರಕ್ಕಾರಂಭಿಸಿದನು-ಈಸಲದ ಸುಯೋಗವು ಕೂಡಿ ಕಳೆಯುವ ಯಂತ್ರಗಳಿಗೊದಗಿತು-ಪ್ರಿಯನೇ ಮುಖ್ಯ ಪ್ರತಿನಿಧಿ. ಸಮಯಕ್ಕೆ ತಕ್ಕ ಸಾಲವೂ ಒದಗಿ ಬಂದಿತು-ವ್ಯಾಪಾರವೂ ಆರಂಭವಾಯಿತು. ಆದರೆ ವಿಕ್ರಯ ಕ್ಷೇತ್ರ ಮಾತ್ರ ಸಿದ್ಧವಾಗಲಿಲ್ಲ. ತೀರಿಸಲಾಗದ ಸಾಲದೊಂದಿಗೆ ಕೈಯಲ್ಲಿದ್ದ ಅಲ್ಪ ಸ್ವಲ್ಪ ಹಣ, ನನ್ನ ಕೆಲವು ಸುವರ್ಣಾಭರಣಗಳು ಮಾಯವಾದವು. ಊರಿನಲ್ಲಿ ಪ್ರತಿಯೊಬ್ಬರ ಹತ್ತಿರವೂ ಸಾಲ. ಹಾಲು ಮೊಸರಿನವರೊಂದಿಗೆ ಸಾಲ, ಅಕ್ಕಿ ಬೇಳೆಯವರೊಂದಿಗೆ ಸಾಲ, ಬಟ್ಟೆಯಂಗಡಿಯಲ್ಲಿ ಸಾಲ, ಮನೆಬಾಡಿಗೆ ಕೊಡಲಿಲ್ಲ ಹೀಗೆಯೇ ನೂರಾರು. ನಿರಶನವ್ರತಕ್ಕಾರಂಭವಾಯಿತು. ಬಂಗಾಳದ ಘೋರಕ್ಷಾಮವನ್ನು ಮೀರಿಸುವಂತಹ ಕ್ಷಾಮವೆಮ್ಮನ್ನು ಸುಲಿಯಲಾರಂಭಿಸಿತು. ಜೊತೆಗೆ ರೋಗಾದಿಗಳ ಬಾಧೆ ಕಂದನಿಗೆ ತಿರಿದು ತಂದ ಹಾಲು. ಒಮ್ಮೆಯಾದರೂ, ಒಂದು ದಿವಸವಾದರೂ ದಿವಂಗತನಾದ ನನ್ನ ಸ್ವಾಮಿಯ ಆತ್ಮ ಶಾಂತಿಗಾಗಿ ಉಪವಾಸಮಾಡಿ ಪರಮಾತ್ಮನನ್ನು ಪ್ರಾರ್ಥಿಸಿದ್ದರೆ.........

* * * * * *

ವಾಚಕರೇ, ವಿಷಾದ ವೃತ್ತಾಂತವಿದು. ವಿಸ್ತಾರವಾದುದಕ್ಕೆ ನನ್ನನ್ನು ಮನ್ನಿಸಿ. ಮುಂದಿನ ವೃತಾಂತವು ಬಹು ಸಂಕ್ಷೇಪ. ಯಾವ ವ್ಯಕ್ತಿಯ ಮಾಯಾಪಾಶಕ್ಕೆ ನಾನು ಬಿದ್ದೆನೋ ವಿಧಿಯವನ ವಿಷಯದಲ್ಲಿ ಬಹು ಕ್ರೂರವಾಯಿತು. ಸಾಲಗಾರರ ಪೀಢನೆಯು ಅಧಿಕವಾಗುತ್ತಾ ಪ್ರಿಯನ ಸಹನಗುಣವು ಕ್ಷಯಿಸುತ್ತಾ ಬಂದಿತು. ಕೆಲವರಿಗೆ ಮಾನಹೋಗುವಷ್ಟು

ದುರುಕ್ತಿಗಳ ಪ್ರಯೋಗವಾಯಿತು--ಮತ್ತೆ ಕೆಲವರಿಗೆ ಕಶಾಪ್ರಹಾರವಾಯಿತು-ಇನ್ನು ಕೆಲವರಿಗೆ ಪಾದರಕ್ಷಾಸೇವೆಯೂ ಆಯಿತು. ಮಾನವ ಪೈಶಾಚಿಕ ಗುಣವು ಪ್ರತಿಕಾರಕ್ಕಾಗಿ ಅವರನ್ನು ಪ್ರೇರೇಪಿಸುತ್ತಿತ್ತು. ಐದು ವರ್ಷಕ್ಕೊಮ್ಮೆ ನಡೆಯುವ ನಗರಾಧಿಕಾರಿಯ ಚುನಾವಣೆಯಲ್ಲಿ ಸರ್ಕಾರವೇ ಜನರಕೈಗೆ ನ್ಯಾಯಾನ್ಯಾಯ ವಿಮರ್ಶೆಯನ್ನು ಕೊಡುತ್ತದೆ. ಅಂದೇ ಪ್ರತೀಕಾರಿಗಳಿಗೆ ಹಬ್ಬದ ದಿನ. ನಿರ್ಭಾಗ್ಯಳಾದ ನನ್ನ ಜೀವನವನ್ನು ಮತ್ತೂ ವಿಷಮಯವಮಾಡಲಿಕ್ಕೆ ಅಂತಹ ದಿನವೊಮ್ಮೆ ಬಂದಿತು. ಹಣವೇ, ನೀಚ ಹಣವೇ ! ಮಧ್ಯಾಹ್ನ. ಬಿಸಿಲಿನ ಬೇಗೆಯು ಸಹಿಸಲಶಕ್ಯವಾಗಿದೆ. ಆ ವೇಳೆಯಲ್ಲಿ ಕೆಲವು ಪುಣ್ಯಾತ್ಮರು ನನ್ನ ಪ್ರಿಯನ ಮೃತ ಕಳೇಬರವನ್ನು ತಂದು ಮನೆಗೆ ಹಾಕಿದರು. ಇದು ಪ್ರತಿಕ್ರಿಯೆಯ ಪರಮಾವಧಿ. ನನ್ನ ಪಾಪಕೃತ್ಯದಂತ್ಯ. ನನಗೆ ಮರಣದ ಆಹ್ವಾನ.

ಕೊನೆಯ ಮಾತುಗಳು ಮಾತ್ರ ಉಳಿದಿವೆ. ನಿನ್ನೆ ಪ್ರಿಯ ಕಂದನನ್ನು ಹಳೆಯ ಸೇವಕನೊಂದಿಗೆ ತಾಯಿಯ ಬಳಿಗೆ ಕಳುಹಿಸಿದೆ ನನಗೂ ಜಗತ್ತಿಗೂ ಇದ್ದ ಸಂಬಂಧವು ಆ ಕಂದನ ನಿಷ್ಕ್ರಮಣದಿಂದ ಮುಗಿಯಿತು. ನನಗಿನ್ನು ಈ ಜಗತ್ತಿನಲ್ಲಿ ಸ್ಥಳವಿಲ್ಲ ಕೆಟ್ಟ ಕಥೆಯು ಬಿನ್ನಪದಿಂದ ನಿಮ್ಮ ಮನವನ್ನು ಕಲುಷಿತ ಮಾಡಿದ ಈ ಕಳಂಕಿನಿಯನ್ನು ಕ್ಷಮಿಸಿ. ನಿಮ್ಮ ಮೃದು ನುಡಿಯೇ ನನಗೆ ಅಮೃತವಾಕ್ಯಾಗುವುದು.

ಬಂಧು ಭಗಿನಿಯರೇ, ಪ್ರತಿಯೊಂದು ಮತದ ಅನುಯಾಯಿಗಳೂ ಮೃತ್ಯುಶಯ್ಯೆಯಲ್ಲಿರುವವರ ಅಂತಿಮ ಅಪೇಕ್ಷೆಯನ್ನು ಅತ್ಯಂತ ಗೌರವದಿಂದ ಆದರಿಸುವರು. ನನ್ನ ಈ ಒಂದು ಬಿನ್ನಪವನ್ನು ಆದರಿಸುವಿರಾ:- ಕಾಲ ಪರಿಸ್ಥಿತಿಯನ್ನರಿಯದ ಸಮಾಜ ಮುಖಂಡರೆನಿಸಿಕೊಂಡು ಮೆರೆಯುವ ಮುಡೆಯರ ಮಾತಿಗೆ ಮರುಳಾಗಬೇಡಿರಿ. ನನ್ನಂತೆ ವಿಧವೆಯರಾಗುವ ನಿಮ್ಮ ಕುಮಾರಿಯರನ್ನು ವೈಧವ್ಯವೆಂಬ ಕಾರಾಗಾರದಲ್ಲಿ ಹಾಕಿ, ಅವರು ಕುಟಿಲೋಪಾಯಗಳಿಂದ ತಮ್ಮ ನಿವೃತ್ತಿಮಾರ್ಗವನ್ನೂ, ಆಶಾಸಾಫಲ್ಯ ಮಾರ್ಗವನ್ನು ಅರಸುತ್ತ ಹೋಗುವಂತೆ ಮಾಡಬೇಡಿರಿ. ನೀವೇ ಮನಃಪೂರ್ವಕವಾಗಿ ಅವರನ್ನಾಶೀರ್ವದಿಸಿ ಅನುರೂಪನಾದ ದೃಢಾಂಗನಾದ ತರುಣನಿಗಿತ್ತು ವಿವಾಹ ಮಾಡಿ. ನಿಮಗೂ, ನಿಮ್ಮನ್ನೇ ನಂಬಿರುವ

ಬಡಬಾಲಿಕೆಯರಿಗೂ ಇದರಿಂದ ಕಲ್ಯಾಣವುಂಟಾಗುವುದು. ಇದಕ್ಕೆ ವಿಘ್ನಕಾರಿಯಾಗೊದಗುವ ರೂಢಿಯಾಚರಣೆ, ಜಾತಿ ಮತಗಳ ಪ್ರತಿಬಂಧ, ಶತ್ರುಭಾವಗಳೊಂದನ್ನೂ ಗಣನೆಗೆ ತಂದುಕೊಳ್ಳದೆ ನಿಮ್ಮ ನಂಬಿಕೆಯನ್ನು ಕಾರ್ಯರಂಗದಲ್ಲಿ ತೋರಿಸಿ. ಸಭೆ ಸಮ್ಮೇಳನಗಳಲ್ಲಿ ವಿಧವಾ ವಿವಾಹದ ಮಹತ್ವವನ್ನು ಬೀರಿ ಜೊಗಳು ಸನ್ನಿ ಹಿಡಿದವರಂತೆ ಕಾಣಿಸಿಕೊಳ್ಳುವುದಕ್ಕಿಂತಲೂ ಸ್ವಗೃಹ ಸುಧಾರಣೆಯ ಮೂಲಕ ಲೋಕಕ್ಕೆ ಮೇಲ್ಪಂಕ್ತಿಯಾಗುವುದೇ ಮೇಲು.

ಇನ್ನು ನನ್ನ ಅನಂತ ಪ್ರಣಾಮಗಳು. ಭೋರ್ಗರೆಯುತ್ತಾ ನನ್ನನ್ನು ಒಂದೇ ತುತ್ತಿಗೆ ಭಕ್ಷಿಸಲು ಸಿದ್ಧವಾಗಿರುವ ಸಮುದ್ರದೆಡೆಗೆ ನಿಮ್ಮಿಂದ ಬೀಳ್ಕೊಂಡು ಇದೋ ತೆರಳುವೆನು.

---

# ಪರಿಣಾಮ.



'ಅಣ್ಣಾ !'

ಪತ್ನಿಯೊಂದಿಗೆ ಪಗಡೆಯನ್ನಾಡುತ್ತಿದ್ದ ವೀರನರಸಿಂಹನು ಚಕಿತನಾದನು. "ಅರಸೆಂಬ ಮರ್ಯಾದೆಯನ್ನು ಕಿಂಚಿತ್ತಾದರೂ ತೋರಿಸದೆ ಹೀಗೆ ನನ್ನನ್ನು ಸಂಬೋಧಿಸುವವರಾರು? ಎಂದಂದುಕೊಂಡು "ಯಾರದು?"

"ನಾನಣ್ಣಾ, ಆಟಹೂಡಿರುವೆಯೋ? ಸರಿ; ನಿನಗೆ ಸೋಲು ಸಿದ್ಧ! ಅತ್ತಿಗಮ್ಮನವರ ಮೇಲೆ ನೀನು ಗೆಲ್ಲುವುದೆಂದರೇನಣ್ಣಾ! ಸೂರ್ಯನು ಪಶ್ಚಿಮದಲ್ಲಿ ಹುಟ್ಟುವ ಹಾಗೆ!

"ಛೋ! ಕೃಷ್ಣ, ನಿನಗೆ ಸಮಯಾಸಮಯಗಳು ಗೊತ್ತಿಲ್ಲ; ಏಕಾಂತವಾಸದಲ್ಲಿ ನಾನು ಪಗಡೆಯನ್ನಾಡುತ್ತಿದ್ದರೆ, ಏನು—ಇಲ್ಲಿಯೂ ಬಂದು ಮನಸ್ಸೀ ಹರಟುವೆ?"

"ಅಣ್ಣಾ, ನೀನೇನೋ ದಿನೇ ದಿನೇ ನನ್ನ ವಿಷಯದಲ್ಲಿ ಹೊಸ ಮನುಷ್ಯನಾಗುತ್ತಿದ್ದಿ" - ಏಕಾಂತವಾಸವೆಂದರೇನು, ಬಾಲಕನಾದ ನಾನು ಬರಬಾರದೆಂದರೇನು; ನನಗೇಕೋ ಒಂದು ಒಂದು ಅರ್ಥವಾಗುವುದಿಲ್ಲ."

"ಮೂರ್ಖ, ಹೇಳಿದ್ದು ಕೇಳದೆ ಕುಟೀಕೆಗಳಿಗಾರಂಭಿಸಿದೆ. ಕೇವಲ ಈ ಅಲ್ಪ ವಯಸ್ಸಿನಲ್ಲಿಯೇ ನಿನಗೀ ದುರ್ಬದ್ಧಿ ಹುಟ್ಟಿದ ಮೇಲೆ ಮುಂದೆ ನಾಲ್ವರಲ್ಲಿ ನೀನು ಸರಿಸಮನಾಗಿ ಬಾಳುವೆಯಾ?"

"ಹಾ! ಹಾ! ಏನಂದೆ, ನನಗೆ ಕುಬುದ್ಧಿ ಹುಟ್ಟಿರುವುದೆಂದೋ!-- ಬಾಲ್ಯದಲ್ಲಿಯೇ ನಾನು ದುರ್ಮಾರ್ಗ ಪ್ರವರ್ತಕನಾಗಿರುವೆನೆಂದೋ!"—

"ಹೌದು, ಅಲ್ಪಮತಿಯೇ ನಿನಗೆ ಬಾಲ್ಯ ಒಂದು ಕೇಡು-- ದುರ್ಮಾರ್ಗಪ್ರವರ್ತಕ— ದ.ರಾತರಗಾಮಿ—ಭಂಡ."

ಕೃಷ್ಣನಿಗೆ ಕಣ್ಣು ತುಂಬಾ ನೀರು ಬಂತು. ಧಾರಾಕಾರವಾಗಿ, ತಡೆಯಿಲ್ಲದೆ, ಬರುತ್ತಿದ್ದ ಕಂಬನಿಯ ಪ್ರವಾಹವನ್ನು ತನ್ನ ಉತ್ತರೀಯದಲ್ಲಿ

ತಡೆಯಲು ಬಹುಬಾರಿ ಯತ್ನಿಸಿದನು. ಸಫಲವಾಗಲಿಲ್ಲ. ಕಂಬನಿಗರೆ ಯುತ್ತ "ಅಣ್ಣಾ, ನನ್ನ ವಿಚಾರದಲ್ಲಿ ನಿನಗೀ ಅಪವಾರ್ತೆಯನ್ನು ಯಾರು ಹೇಳಿದರೋ ಕಾಣೆ; ಅಣ್ಣಾ; ಅಯ್ಯನು ಹೋದಾರಭ್ಯ ನಿನ್ನನ್ನೇ ಪಿತ ನೆಂದೂ, ಅತ್ತಿಗಮ್ಮನವರನ್ನೇ ಮಾತೆಯೆಂದೂ ಮನಃಪೂರ್ವಕವಾಗಿ ತಿಳಿ ದಿದ್ದ ನನ್ನ ಮೇಲೆ ವಿಷಭರಿತವಾದ ಈ ಬಾಣವನ್ನು ನೀನು ಬಿಡಬಹುದೇ? ಅಣ್ಣಾ, ಯಾವಾಗ—ಯಾವ ಸಂದರ್ಭದಲ್ಲಿ, ನಾನು ನಿನಗೆ ಎದುರು ಹೇಳಿದೆ? ಯಾವ ದುರ್ಮಾರ್ಗದಲ್ಲಿ ನಾನು ಹೋದೆ? ಅಣ್ಣಾ, ನನ್ನ ವಿಷಯ ದಲ್ಲಿ ನಿನಗೆ ಸಂದೇಹವಿದ್ದರೆ ಗುರು ಅಪ್ಪಾಜಿಯವರನ್ನು ಕೇಳು.

"ಕಂಡದ್ದಾಯಿತು! ಇನ್ನು ಕೇಳುವುದೊಂದೇ ಬಾಕಿ! ಆಹಾ! ಒಳ್ಳೇ ಸಾಕ್ಷಿಯನ್ನೇ ಹೇಳಿದೆ. ಏನು! ಆ ರಾಜದ್ರೋಹಿ ಅಪ್ಪಾಜಿಯನ್ನು ಕೇಳು ವುದೋ? ಒಳ್ಳೆಯ ಸಾಕ್ಷಿಯನ್ನೇ ಹುಡುಕಿದೆ, ಕೃಷ್ಣಾ !"

"ಅಣ್ಣಾ, ಅದಂತಿರಲಿ ಇಂದಿನ ನಿನ್ನ ವರ್ತನೆಯು ನನ್ನ ಹೃದಯ ದಲ್ಲಿ ಬಹು ಭಯಂಕರವಾದ ಭೀತಿಯನ್ನುಂಟುಮಾಡುತ್ತಿದೆ. ಅಣ್ಣಾ, ಆಸ್ಥಾನದಲ್ಲಿ ನೀನು ತಿಮ್ಮಣ್ಣ ಕವಿಯನ್ನು ಅಮರ್ಯಾದೆಯಿಂದ ಕಂಡು, ಆತನು ನಿನ್ನ ಮೇಲೆ ರಚಿಸಿದ್ದ ಕವನವನ್ನು ಹೇಳನಿಂತರೆ, ಗರ್ಜಿಸಿ ಕುಳ್ಳಿ ರಿಸಿದುದು ನ್ಯಾಯವೇ? "ಮಾಡಬಾರದುದನ್ನು ಮಾಡಬಾರದು" ಎಂದು ನೀತಿಹೇಳಿದ ವಯೋವೃದ್ಧರೂ, ಜ್ಞಾನವೃದ್ಧರೂ ಆದ ಅಪ್ಪಾಜಿಯವರು ರಾಜದ್ರೋಹಿಗಳಾದರಲ್ಲವೇ ?"

"ಕೃಷ್ಣ, ಅಪ್ಪಾಜಿಯು ತೀರ್ಥರೂಪರವರ ಗೆಳೆಯನಾಗಿರದಿದ್ದಲ್ಲಿ ಎಂದೋ ಶೂಲದ ಮರವನ್ನು ಕಾಣುತ್ತಿದ್ದನು. ದಯೆಯಿಂದ ಈ ದಿನವೂ ಅವನನ್ನು ಕ್ಷಮಿಸಿದೆನು. ಮುಂದೆ ನೀತಿ ಬೋಧನೆಗೆ ಬಂದರೆ ಅವನ ಸ್ಥಿತಿಯು ನೆಟ್ಟಗಾಗಲಿಕ್ಕಿಲ್ಲ. ತಿಮ್ಮಣ್ಣನ ವಿಚಾರದಲ್ಲಿ ಬೋಧನೆ ಮಾಡ ಬರಲು ಅವನಾರೋ? ನಾನು ಅರಸು; ನನ್ನ ಮನಸ್ಸು ಬಂದಂತೆ ನಾನು ಮಾಡುವೆನು."

"ಅಣ್ಣಾ, ನೀನು ಶಾಸ್ತ್ರರೀತ್ಯಾ ಅಭಿಷಿಕ್ತ ರಾಜನೇನೋ ಅಹುದು ಆದರೆಜನರು ನಿನಗೆ ಎದುರು ಬಿದ್ದು ನಿನ್ನನ್ನು ಪದಚ್ಯುತನನ್ನಾಗಿ ಮಾಡ

ಬಹುದು ಅಣ್ಣಾ, ಜನರಿಗಾಗಿ ಅರಸನಲ್ಲದೆ, ಅರಸನಿಗಾಗಿ ಜನರಲ್ಲ. ತಿಮ್ಮಣ್ಣ ಕವಿಗೆ ನೀನು ಮಾಡಿದ ಅಪಮಾನದಿಂದ ಜನರೆಷ್ಟು ನೊಂದು ಕೊಂಡಿದ್ದಾರೆ ಮತ್ತು ನಿನ್ನ ವಿಷಯದಲ್ಲಿ ಎಷ್ಟು ಅಸಮಾಧಾನ ಹೊಂದಿ ದಾರೆಂಬುದು ಗೊತ್ತೇ ?''

''ನನಗೇನೋ ಗೊತ್ತಾಗಬೇಕಾದ ಅವಶ್ಯಕತೆಯಿಲ್ಲ; ನಿನ್ನ ಹಿತ ಬೋಧನೆಯು ನನಗೆ ಬೇಕಿಲ್ಲ. ನೊಂದುಕೊಂಡರೆ ಜನರು" ನನ್ನನ್ನೇನು ಮಾಡಬಲ್ಲರು? ನನ್ನನ್ನು ಪದಚ್ಯುತನನ್ನಾಗಿಸುವುದು ಮುಕ್ಕಣ್ಣನಿಗೂ ಅಸಾಧ್ಯವಾದ ಕೆಲಸವೇ. ಕೃಷ್ಣ, ಬಾಲಕನೆಂದು ನಿನ್ನನ್ನು ಬಿಟ್ಟರೆ ನೀನು ಬಹಳ ಚಿಗುರಿಕೊಳ್ಳುತ್ತಿದ್ದಿ ಸ್ವಲ್ಪ ಜೋಕೆಯಿಂದಿರು. ಅಪ್ಪಾಜಿಯ ದುರುಪದೇಶದಿಂದ ಅಸಂಬದ್ಧವನ್ನಾಡಲು ಇನ್ನು ಮೇಲೆ ಧೈರ್ಯತಳೆಯ ಬೇಡ. ನನ್ನ ಶಾಂತತೆಯು ಎಂದೂ ಇಂದಿನ ಹಾಗೆ ಇರಲಾರದು''

ಕೃಷ್ಣನಿಗೆ ನಗೆ ಬಂದಿತು! ಗಹಗಹಿಸಿ ನಕ್ಕು-''ಅಣ್ಣಾ, ಭಲೆ ಏನು ಬೆದರಿಸಲಿಕ್ಕೆ ಆರಂಭಿಸಿದೆಯಲ್ಲಾ? ಅಣ್ಣಾ, ನಮ್ಮ ತಾಯಿಯು ದೇವೀ ನಾಗಾಂಬಿಕೆಯಾದಾಕ್ಷಣವೇ ತಂದೆ ಸಾಳ್ವರ ನರಸಿಂಗನಲ್ಲದೆ ಬೇರೆಯಾ ದಾರೇ? ನಿನ್ನ ಹಿತೋಕ್ತಿಗಳಿಗೆ ನಾನು ಶರಣು ಹೊಡೆವೆನಲ್ಲದೆ, ಪುಂಡು ಬೆದರಿಕೆಗಳಿಗಲ್ಲ. ಎಂತೇ ಆದರೂ ಪೂಜ್ಯ ವಿದ್ಯಾರಣ್ಯರಿಂದ ಸ್ಥಾಪಿಸ ಲ್ಪಟ್ಟು, ಪ್ರಸಿದ್ಧ ಬುಕ್ಕರಾಯನಿಂದ ಆಳಲ್ಪಟ್ಟಿರುವ ಈ ವಿಜಯನಗರ ರಾಜ್ಯವನ್ನು ನೀನು ದುರ್ಮಂತ್ರಿಯಾದ ಚಂದ್ರಶೇಖರನ ಇಚ್ಛೆಯಂತೆ ಮನಸ್ಸು ಬಂದಹಾಗೆ ಆಳಿ, ಅನಾಯಕ ರಾಷ್ಟ್ರವನ್ನಾಗಿಸುವುದು ನನ್ನ ಮನ ಸ್ಸಿಗೆ ಸ್ವಲ್ಪವೂ ಒಪ್ಪುವುದಿಲ್ಲ. ಯಾವ ವಿಜಯನಗರವು ಲಲಿತಕಲಾ ಕೋವಿದರಿಗೂ, ಪ್ರತಿಭಾಶಾಲಿಗಳಾದ ಕವಿಗಳಿಗೂ, ದೇಶಹಿತೈಷಿಗಳಿಗೂ ಆಸ್ತಿಭಾರದಂತಿತ್ತೋ ಅದೇ ರಾಜ್ಯವು ''ವೀರನರಸಿಂಹ''ನ ಆಳ್ವಿಕೆಯಲ್ಲಿ ಶೂನ್ಯವಾದ ಸ್ಮಶಾನದಂತಾಗುವುದನ್ನು ನಾನು ಸಹಿಸಲಾರೆ. ಅಣ್ಣಾ, ನೊಂದ ಕವಿಯ ಕಣ್ಣಿನಿಂದ ಉದುರಿದ ಕಂಬನಿಯ ಒಂದೊಂದು ಹನಿಯೂ ನಿನ್ನ ಆಯುವಿನ ಒಂದೊಂದು ವರ್ಷವನ್ನು ಕಡಿಮೆಮಾಡುವುದೆಂಬುದನ್ನು ಮರೆಯಬೇಡ.''

೧

"ಕೃಷ್ಣಾ, ನನ್ನ ಆಳ್ವಿಕೆಯನ್ನು ಸಹಿಸುವ ಹಾಗಿದ್ದರೆ ಇಲ್ಲಿರಬಹುದು. ಇಲ್ಲದಿದ್ದರೆ ಮನಸ್ಸು ಬಂದೆಡೆಗೆ ಹೋಗಬಹುದು. ಇನ್ನು ಮೇಲೆ ನಾನೀ ಹಿತೋಕ್ತಿಗಳನ್ನು ಪ್ರಲಾಪವನ್ನೂ, ತಾರತಮ್ಯವನ್ನರಿಯದ ಉದ್ವೇಗದ ಮಾತುಗಳನ್ನೂ ಸಹಿಸಲಾರೆ."

"ಅಣ್ಣಾ, ನನ್ನನ್ನು ರಾಜ್ಯದಿಂದಟ್ಟುವಷ್ಟು ಶಕ್ತಿಯನ್ನು ನೀನು ತಾಳಿಯೂ ಇಲ್ಲ; ತಾಳಲೂ ಆರೆ. ನನ್ನ ಹಿತೋಕ್ತಿಗಳು ಆಲೋಚನೆಗೆ ಅರ್ಹವಾದುವು. ಕುಳಿತು ಆಲೋಚನೆ ಮಾಡು. ನಮಿಸುತ್ತೇನಣ್ಣಾ, ಹೋಗಿಬರುವೆನು" ಎಂದು ಹೇಳಿ ಕೃಷ್ಣನು ಬೀಳ್ಕೊಂಡನು.

ಕೃಷ್ಣನು ಹೋದಕಡೆ ನೋಡಿ ಅರಸನು ಕಟಕಟನೆ ಹಲ್ಲುಕಡಿದನು; ಹೂಡಿದ್ದ ಪಗಡೆಯ ಆಟದಹಾಸನ್ನು ಕಿತ್ತೊಗೆದನು. ಮಹಾರಭಸದಿಂದ ಕಾಲನ್ನು ನೆಲಕ್ಕೊದೆದು 'ಪುಂಡಾ ನಿನಗಿನ್ನು ಹೆಚ್ಚುಕಾಲ ಈ ಜಗತ್ತಿನಲ್ಲಿ ಸ್ಥಳವಿಲ್ಲ'ವೆಂದಂದುಕೊಂಡು ಒಳಗೆ ಹೋದನು.

೨

ಹೋದ ಅಧ್ಯಾಯದಲ್ಲಿ ನಾವು ಕಂಡಂತೆ ನಮ್ಮ ಕಥಾನಾಯಕ ಶ್ರೀ ಕೃಷ್ಣ ದೇವರಾಯ (ಕೃಷ್ಣ)ನನ್ನು ಮನಬಂದಂತೆ ಅಂದವನು ಬೇರೆ ಯಾರೂ ಅಲ್ಲ; ಸಾಳ್ವರ ವೀರನರಸಿಂಹ. ೧೫೦೪-೧೫೦೯ರ ವರೆಗೆ ವಿಜಯನಗರವನ್ನಾಳಿದ ಅರಸು. ಬುಕ್ಕರಾಯನ ನಂತರ ಆಳಿದ ಅರಸರಲ್ಲಿ ೧೪೪೬ರಲ್ಲಿ ಆಳಿದ ದೇವರಾಯನೇ ಪ್ರಸಿದ್ಧಿ ಹೊಂದಿದವನು. ದೇವರಾಯನ ಮಗನಾದ ಇಮ್ಮಡಿ ನರಸಿಂಹನನ್ನು ಸೇನಾನಾಯಕನಾದ ನರಸ (ಅಥವಾ ನರಸಿಂಗ) ನೆಂಬುವನು ಕೊಂದು ತಾನು ೧೪೯೬ರಿಂದ ಆಳಲಾರಂಭಿಸಿದನು. ನರಸನು ಪರಮಶೂರ. ನರಸನಿಗೆ ತಿಪ್ಪಾಜಿ, ನಾಗಾಂಬಿಕೆಯೆಂಬಿಬ್ಬರು ಪತ್ನಿಯರಿದ್ದರು. ತಿಪ್ಪಾಜಿಯ ಉದರವಲ್ಲಿ ವೀರನರಸಿಂಹನೂ, ನಾಗಾಂಬಿಕೆಯ ಗರ್ಭಾಂಬುಧಿಯಲ್ಲಿ ಶ್ರೀ ಕೃಷ್ಣದೇವರಾಯನೂ ಜನಿಸಿದರು. ನರಸನ ನಂತರ ವೀರನರಸಿಂಹನೇ ಆಳಲಾರಂಭಿಸಿದನು.

ಕಿರಿವಯಸ್ಸಿನ ತಮ್ಮನನ್ನು ನರಸಿಂಹನು ಸ್ವಂತ ಮಗನಂತೆಯೇ ಕಾಪಾಡುತ್ತಿದ್ದನು. ತಮ್ಮನ ಸುಖವೇ ತನ್ನ ಸುಖವೆಂದು ಬಗೆದಿದ್ದನು. ತಂದೆ ಇರುವಿಕೆಯ ಸುಕೃತವನ್ನು ತಾನು ಪಡೆದಷ್ಟು ಕೂಡ ತಮ್ಮನು ಪಡೆ

ಯಲಿಲ್ಲವಲ್ಲಾ ಎಂದು ಪಶ್ಚಾತ್ತಾಪಪಡುತ್ತಿದ್ದನು. ಇಷ್ಟು ಪ್ರೇಮವೂ ನರಸಿಂಹನಿಗೆ ಮಕ್ಕಳಿಲ್ಲದಿದ್ದುದರಿಂದ ಮೊಳಗುತ್ತಿದ್ದಿತು. ನರಸಿಂಹನೂ ಅವನ ಪತ್ನಿಯೂ ದೇವರಿಗೆ ಹರಿಕೆ ಹೊತ್ತು ಹೊತ್ತು ಸಾಕಾದರು. ನಿಸ್ಪೃಹನಾದ ದೇವರು ಇವರ ಲಂಚಗಳಿಗೆ ಕೈವೊಡ್ಡಲಿಲ್ಲ; ಕೊನೆಗೆ ಹೊತ್ತಿರುವ ಹರಕೆ ಮರೆಯುವ ವೇಳೆಗೆ ನರಸಿಂಹನ ಪತ್ನಿಯು ಒಂದು ರೋಗಿಷ್ಟ ಶಿಶುವನ್ನು ಪೆತ್ತಳು.

ಶಿಶುವಾದಾರಭ್ಯ, ನರಸಿಂಹನ ದೃಷ್ಟಿಪಥವು ಚಂಚಲವಾಯಿತು. ಮೊದಲು ಮೂಡಿದ್ದ ಭ್ರಾತೃವಾತ್ಸಲ್ಯವು ಕಡಲೊಡೆಯಿತು; ಕೊನೆಕೊನೆಗೆ ಸಂಪೂರ್ಣವಾಗಿ ಅಳಿಯುತ್ತಲೇ ಬಂದಿತು. 'ಹೆತ್ತವರಿಗೆ ಹೆಗ್ಗಣಮುದ್ದು' ಎಂಬಂತೆ ಜನಿಸಿದ ಶಿಶುವು ಕುಷ್ಟರೋಗಿಯಂತೆ, ನಿರ್ಬಲವಾಗಿ, ಚೇತನಶೂನ್ಯವಾಗಿ ವಿಕಾರವಾಗಿದ್ದರೂ ತಂದೆ ತಾಯಿಗಳು ಹಿಗ್ಗಿ ಹೀರೇಕಾಯಿಯಾಗುತ್ತಿದ್ದರು. ಮಗುವಿಗೆ ಬಣ್ಣಬಣ್ಣದ ಉಡಿಗೆಗಳು, ವಿಧವಿಧ ಒಡವೆಗಳು; ತಾಯಿಗೆ ಎಷ್ಟು ಭಂಗಾರ ಹೇರಿದರೂ ಸಾಲದು. ಪ್ರಪಂಚವನ್ನೆಲ್ಲಾ ಒಂದು ಭಂಗಾರದ ಮುದ್ದೆಯನ್ನಾಗಿ ಮಾಡಿ ಆ ಮಹಾತಾಯಿಯ ಕೈಗೆ ಕೊಟ್ಟು—'ಅಮ್ಮಾ, ಇದನ್ನು ನಿನ್ನ ಮಗುವಿನ ಮೇಲೆ ಹೇರು' ಎಂದು ಕೊಟ್ಟರೂ 'ಊ-ಸಾಲದು' ಎನ್ನುವ ಪ್ರಕೃತಿ.

ಕೃಷ್ಣನ ನಡೆ, ನುಡಿ, ವರ್ತನೆ ಎಲ್ಲವೂ ಅಸಹನೀಯವಾಗುತ್ತ ಬಂದಿತು. ಕೃಷ್ಣನು ಮಾಡಿದ್ದೆಲ್ಲಾ, ಆಡಿದ್ದೆಲ್ಲಾ ದೋಷವಾಗಿ ಪರಿಣಮಿಸುತ್ತ ಬಂದಿತು. ಮುಖ್ಯ ನರಸಿಂಹನ ಹೃದಯವು ದಿನೇದಿನೇ ಸಂಕುಚಿತವಾಗುತ್ತ ಬಂದಿತು.

ಒಂದು ದಿನ ಅಣ್ಣತಮ್ಮಂದಿರಿಬ್ಬರೂ ಬೇಟೆಗೆಂದು ಅಡವಿಗೆ ಹೋದರು. ಅಣ್ಣನು ಒಂದು ಕಾಡುಹಂದಿಯನ್ನಟ್ಟಿಸಿಕೊಂಡು ಹೋದನು. ತಮ್ಮನು ಬೇಟೆಯನ್ನರಸುತ್ತಾ ಒಂದು ಪೊದೆಯನ್ನು ಕೆಣಕಿದನು. ದೈವವಶಾತ್ ಅಲ್ಲಿ ಒಂದು ಹುಲಿಯು ಮರಿಗೆ ಮೊಲೆಯುಣಿಸುತ್ತಿತ್ತು. ಕೃಷ್ಣನು ಪೊದೆಯನ್ನು ಕೆದರಲು ವ್ಯಾಘ್ರಿಯು ಭೀತಳಾಗಿ ಮೊಲೆಯುಣಿಸುವುದನ್ನು ನಿಲ್ಲಿಸಿತು. ತನ್ನ ಮಾರ್ಗಕ್ಕೆ ಅಡ್ಡಬಂದವವನ ಮೇಲೆ ಪರಮಾಗ್ರಹ

ಗೊಂಡು, ಒಮ್ಮೆಲೆ ಛಂಗನೆ ಹಾರಿತು. ಕೃಷ್ಣನು ಕುಶಲತೆಯಿಂದ ಹೆಯ ವನ್ನು ಒಂದು ಪಕ್ಕಕ್ಕೆಳೆದನು. ಇದು ಹುಲಿಯ ಹುಮ್ಮಸ್ಸನ್ನು ಹೆಚ್ಚಿಸಿತು. ಕುಪಿತಳಾದ ವ್ಯಾಘ್ರಿಯು ಕೃಷ್ಣನ ಕುದುರೆಯ ಮೇಲೆ ಮತ್ತೊಮ್ಮೆ ಹ ರಿ ಅವನ್ನು ಯಮಾಂತಃಪುರಕ್ಕೆ ಅಟ್ಟಿತು. ತರುಣನಾದ ಕೃಷ್ಣನಿಗೆ ಕೊಂಚ ಭೀತಿಯಾದರೂ ಅವನ ಲೆಕ್ಕಿಸದೆ ಒರೆಯಿಂದ ಕತ್ತಿಯನ್ನು ಹಿರಿದು ಕೆಚ್ಚಿದೆ ಯನ್ನು ತೋರಿಸುತ್ತಾ ನಿಂತನು. ಆಗ್ರಹಭರಿತವಾದ ಹುಲಿಯು ಕನ್ನಡ ತರುಣನ ಮೇಲೆ ಹಾರಿತು.

ಕೃಷ್ಣನೂ ವ್ಯಾಘ್ರಿಯೂ ಕಾದಲಾರಂಭಿಸಿದರು; ವ್ಯಾಘ್ರಿಯನ್ನು ಜಯಿಸುವುದೆಂದರೆ—ಪಾಪ! ಬಾಲಕನಿಗೆ ಸಾಮಾನ್ಯ ಕೆಲಸವಾಗಲಿಲ್ಲ.

೩

ಸಾಮಾನ್ಯವಾಗಿ ಹಿತವನ್ನೆಣಿಸುವವರೇ ಆದರಕ್ಕೆ ಪಾತ್ರರು. ಶ್ರೀ ಕೃಷ್ಣದೇವನೂ, ಅಪ್ಪಾಜಿಯೂ ಮೊದಲಿನಿಂದಲೂ ಪ್ರಜೆಗಳ ಪಕ್ಷಪಾತಿ ಗಳು; ಪ್ರಜೆಗಳ ಸೌಖ್ಯಕ್ಕಾಗಿ ಜೀವನವನ್ನು ತೃಣವಾಗೆಣಿಸಿದ್ದವರು. ಇವ ರಿಬ್ಬರ ಮೇಲೆ ಜನತೆಗೆ ಪರಮಾದರ, ಪರಮಗೌರವ. ಬಾಲ್ಯದಿಂದಲೂ ಶ್ರೀ ಕೃಷ್ಣನು ಮನೆಯವರ ಪ್ರೇಮಕ್ಕೆ, ಇಲ್ಲ, ವಾತ್ಸಲ್ಯಕ್ಕೆ ಅಪಾತ್ರನು. ಕೃಷ್ಣನು ವ್ಯಕ್ತಿಗಳಿಗೆ ಹೆಚ್ಚು ಗೌರವವನ್ನು ಕೊಟ್ಟು ಅವರು ಕುಣಿಸಿದಂತೆ ಕುಣಿಯತಕ್ಕವನಲ್ಲ. ಸದಾಕಾಲದಲ್ಲಿ ದೇಶಹಿತ, ದೇಶಿಯರ ಹಿತ ಇವೆರಡು ಸೂತ್ರಗಳನ್ನೇ ಕಣ್ಣುಮುಂದಿಟ್ಟು ಆ ಸೂತ್ರಗಳನ್ನು ಕಾರ್ಯಕ್ಷೇತ್ರದಲ್ಲಿ ಸಾಫಲ್ಯ ಹೊಂದಿಸಲಿಕ್ಕಾಗಿ ಹೆಣಗಾಡುತ್ತಲಿದ್ದನು. ಕೃಷ್ಣನಿಗೆ ಕಾಲ ಕಾಲಕ್ಕೆ ಸದುಪದೇಶಗಳನ್ನು ಕೊಡುತ್ತಾ, ಸ್ಫೂರ್ತಿಯನ್ನು ತುಂಬುತ್ತಾ, ಶ್ರೀರಾಮಚಂದ್ರನ ಗುರು ವಿಶ್ವಾಮಿತ್ರನಂತೆ ಅಪ್ಪಾಜಿಯಿದ್ದನು.

ಅಪ್ಪಾಜಿಯು ಬಹುಜ್ಞಾನಿ, ಸೂಕ್ಷ್ಮದರ್ಶಿ; ಪುತ್ರಸಂತಾನವಾದಾ ರಭ್ಯ ಅರಸು ತನ್ನ ಕುವರನ ಮಾರ್ಗದ ಮುಳ್ಳಿನಂತಿದ್ದ ಶ್ರೀ ಕೃಷ್ಣನನ್ನು ತೆಗೆಯಲು ಯತ್ನಿಸುತ್ತಿದ್ದುದನ್ನು ಚೆನ್ನಾಗಿ ಕಂಡುಕೊಂಡಿದ್ದನು. ದುರ್ಮಂತ್ರಿಯಾದ ಚಂದ್ರಶೇಖರನ ದುರುಪದೇಶವು ಅರಸನ ಮೆದುಳನ್ನು ಹೇಗೆ ದಿನೇದಿನೇ ಕೆಡಿಸುತ್ತಿತ್ತೆಂಬುದನ್ನೂ ತಿಳಿದಿದ್ದನು. ಬೇಟೆಯದೃಶ್ಯವು

ಅಪ್ಪಾಜಿಯ ನಿರ್ಧಾರಗಳನ್ನು ದೃಢಪಡಿಸಿತ್ತು. ಒಂದು ದಿನ ಕೃಷ್ಣನೂ, ಅಪ್ಪಾಜಿಯೂ ವಿನೋದದಿಂದ ಭೋಜನಕ್ಕೆ ಕುಳಿತರು. ಬಾಣಸಿಗನು ತಾನು ಗೈದಿದ್ದ ಪಕ್ವ ಭಕ್ಷ್ಯಗಳನ್ನು ತಂದು ಬಡಿಸಿ ನಿಂತನು. ಇಂದು ಬಾಣಸಿಗನ ಮುಖವು ಬಾಡಿದೆ. ಕೃಷ್ಣನ ಮುಖವು ಎಷ್ಟು ಲಲಿತವಾಗಿ ದ್ಯುತಿತೋರಿತೋ ಅಷ್ಟು ಬಾಣಸಿಗನ ಮುಖದಲ್ಲಿ ದುಃಖವು ತೋರುತ್ತಲಿದೆ. ಕೃಷ್ಣನು ಪರಿಶುಚಿಯನ್ನು ಮಾಡಿ ಭೋಜನವನ್ನಾರಂಭಿಸಬೇಕೆಂದಿರುವ ವೇಳೆಗೆ ಬಾಣಸಿಗನು ಧಾರಾಕಾರವಾಗಿ ಕಂಬನಿಸುರಿಸುತ್ತಾ ಬಡಿಸಿದ ಎಲೆಯ ಮೇಲೆಯೇ ಬಿದ್ದು ಕೃಷ್ಣನ ಪಾದದ್ವಯಂಗಳನ್ನು ಬಲವಾಗಿ ಪಿಡಿದು "ಪ್ರಭುವೇ, ಅಭಯಪ್ರದಾನಮಾಡಬೇಕು. ನಾನು ಮಹಾಪರಾಧಿ" ಎಂದನು.

ಕೃಷ್ಣನಿಗೆ ವಿಷಯವೊಂದೂ ತಿಳಿಯಲಿಲ್ಲ. ಆಶ್ಚರ್ಯವು ಗಡು ಮೀರಿತ್ತು, ಬಾಣಸಿಗನಿಗೆ ಅಭಯಕೊಟ್ಟು ಅವನನ್ನು ಎಳೆಂದು.

"ಏನಿದು ನಡತೆ! ಇದೇನೀ ಕಂಬನಿಯ ಪ್ರವಾಹ!"

"ಮಹಾಪ್ರಭೂ, ನಾನು ಕೃತಘ್ನ; ಪ್ರಭುವಿಗೆ ಎರಡು ಬಯಸಲು ಹೊರಟವನು."

"ಅಯ್ಯಾ ಅದೇನು ವಿಷಯವನ್ನು ಹೇಳು."

"ದೇವಾ, ಮೊದಲಿನಿಂದಲೂ ತಮ್ಮ ಚರಣಸೇವೆಯನ್ನು ಮಾಡಿಕೊಂಡಿರುವ ಈ ದಾಸನೇ ಇಂದು ತಮ್ಮ ಪ್ರಾಣಾಪಹಾರಕ್ಕೆ ಕಾರಣನಾಗಿದ್ದನು."

"ಅಯ್ಯಾ, ನಿನ್ನ ಸೂಚನೆಯು ನನಗೆ ಅರ್ಥವಾಗುವುದಿಲ್ಲ. ವಿಶದವಾಗಿ ಹೇಳು."

"ದೇವಾ, ಇಂದು ಪ್ರಾತಃಕಾಲ ತಮ್ಮ ಭ್ರಾತೃವರ್ಯರು ಒಂದು ಪೊಟ್ಟಣದಲ್ಲಿ ಸುವರ್ಣದಪುಡಿಯೊಂದನ್ನು ತಂದು 'ಭಂಟಾ, ಕೃಷ್ಣನ, ಅಪ್ಪಾಜಿಯ ಭಕ್ಷ್ಯಪದಾರ್ಥಕ್ಕೆ ಇನನ್ನು ಬೆರೆಸು, ಸುಳು ಗೊತ್ತಾಗದಂತೆ ಬಡಿಸು' ಎಂದರು".

"ಅನಂತರ . . ."

" ದೀನರಕ್ಷಕರಾ, ನಾನು ಒಪ್ಪದೇ ಹೋದೆ. ಕೆಲಸಬೇಕಾದರೂ ಬಿಡುತ್ತೇನೆ; ಈ ದುಷ್ಕಾರ್ಯವನ್ನು ಮಾಡಲಾರೆನೆಂದೆ—"

ಅಪ್ಪಾಜಿ—" ಮುಂದೆ ಬೇಗಬೇಗನೆ ಹೇಳು."

ಬಾಣಸಿಗ—" ಅವಕ್ಕೆ ಅರಸರು, ಹೇಳಿದ ಕಾರ್ಯವನ್ನು ಮಾಡಿ ೩,೦೦೦ ಸುವರ್ಣಮೊಹರುಗಳನ್ನು ಪಡೆಯಲಿಚ್ಛಿಸುವೆಯೋ ಅಥವಾ ಸಂಜೆಯೊಳಗಾಗಿ ವಂಶದಲ್ಲಿ ಒಂದು ನರಪಿಳ್ಳೆಕೂಡ ಇರದಂತೆ ನೋಡಿನೋಡಿ ದುಃಖಿಸಿ, ಅನಂತರ ನೀನೂ ವಧಾಸ್ಥಾನಕ್ಕೆ ಹೋಗುವಿಯೋ, ಎಂದರು. ಭಯದಿಂದ ಮೊದಲನೆಯದನ್ನೇ ಒಪ್ಪಿದೆ."

ಅಪ್ಪಾಜಿ-" ಒಪ್ಪಿದ ಮೇಲೆ ಇದೇನೀ ಎರಡು ಬಗೆಯುವ ನಡತೆ."

ಬಾಣಸಿಗ—" ಪೂಜ್ಯರೇ, ದ್ವಾರಕಾವಾಸಿ ಶ್ರೀಕೃಷ್ಣನ ಪ್ರತಿಬಿಂಬದಂತಿರುವ ನಮ್ಮ ಪ್ರಭುಗಳ ಮುಖವೇ ಇದಕ್ಕೆ ಕಾರಣ. ನನ್ನ ಹೃದಯದಲ್ಲಾದ ಚಿತ್ರಹಿಂಸೆಯನ್ನು ವರ್ಣಿಸಲಾರೆ. ಕೋಟ್ಯಾಂತರ ಜನರನ್ನು ರಕ್ಷಿಸಿ, ನರಕದಂತಿರುವ ಈ ರಾಜ್ಯವನ್ನು ರಾಮರಾಜ್ಯವನ್ನಾಗಿಸಲು ಜನಿಸಿರುವ ಪ್ರಭುಗಳು ಚಿರಾಯುಗಳಾಗಿರಲಿ; ಸ್ವರಾಜ್ಯಮಾತೆಯ ಸುವರ್ಣಪೀಠವನ್ನು ವಿಜಯನಗರದಲ್ಲಿರಿಸಲು ಜನಿಸಿರುವ ನಮ್ಮ ಒಡೆಯರು ಸುಖಿಗಳಾಗಿರಲಿ ಆ ಮಾತೆಗೆ ಈ ನುಸಿಯೊಂದು ಮೊದಲನೆಯ ಬಲಿಯಾಗಲಿ."

ಎಂದು ಹೇಳಿ ಅಪ್ಪಾಜಿಯು ತಡೆಯುತ್ತಿದ್ದರೂ ಕೇಳದೆ ಬಕಬಕನೆ ವಿಷಮಿಶ್ರವಾದ ಆಹಾರವನ್ನು ತಿಂದು ಕೃಷ್ಣನ ಪಾದಗಳನ್ನು ಪಿಡಿದು, ಬಾಣಸಿಗನು "ಪ್ರಭುವೇ ಈ ಪರಮದ್ರೋಹಿಯನ್ನು ಮನ್ನಿಸಿ" ಎಂದು ಹೇಳಿ ಮೃತನಾದನು.

ಈ ದೃಶ್ಯವೆಲ್ಲಾ ಕೃಷ್ಣನಿಗೆ ಕನಸು ಕಂಡಂತಿತ್ತು. ಒಂದೂ ಮಾತನ್ನಾಡದೆ ಸುಮ್ಮನೆ ಪಿಶಾಚಗ್ರಸ್ತನಂತೆ ಕುಳಿತಿದ್ದನು. ಬಾಣಸಿಗನು ಸಾಯಲು ಕೃಷ್ಣನಿಗೆ ಎಚ್ಚರಿಕೆಯಾಯಿತು. ಎದ್ದು ಅವನ ಹೃದಯ, ಮುಖಗಳನ್ನು ಪರೀಕ್ಷಿಸಿದನು. ಆ ವೇಳೆಗೆ ಪ್ರಾಣಹೋಗಿದ್ದಿತು. ಕಂಬನಿ ತುಂಬಿದ ಮುಖದಿಂದ "ಅಪ್ಪಾಜಿಯವರೇ, ಅವನ ಆತ್ಮ ಶುದ್ಧತೆಯನ್ನು ನೋಡಿದಿರಾ?" ಎಂದನು.

ಅಪ್ಪಾಜಿ—"ಕೃಷ್ಣಾ, ಬಾಣಸಿಗನ ಹೇಳಿಕೆಯಂತೆ ಸ್ವರಾಜ್ಯವಾತೆಗೆ ಇದು ಪ್ರಥಮ ನಿವೇದನೆ; ಮೊದಲನೆಯ ಬಲಿ; ಕರ್ಣಾಟಕದ ಪೂರ್ವ ಸುಕೃತ. ಆಗಿ ಹೋಗಿದ್ದಕ್ಕೆ ಚಿಂತಿಸಿ ಫಲವೇನು ? ನಡೆ, ಮುಂದಿನ ಕೆಲಸ ವನ್ನು ಆಲೋಚಿಸುವಾ" ಎಂದು ಕೃಷ್ಣನನ್ನು ಕರೆದುಕೊಂಡು ಹೊರಟು ಹೋದನು.

೪

ಬ್ರಾಹ್ಮಣನಾದ ಅಪ್ಪಾಜಿಯಲ್ಲಿ ಅಡಗಿದ್ದ ಕ್ಷಾತ್ರತೇಜವು ಗವಿಯಲ್ಲ ಡಗಿದ್ದ ಸಿಂಹವನ್ನು ಕೆಣಕಿದರೆ ಅದು ರೇಗಿ ಏಳುವಂತೆ ಎದ್ದಿತು. ಸಾತ್ವಿಕ ನಾಗಿ ಋಷಿಯಂತಹ ಮುಖಚ್ಛಾಯೆಯನ್ನು ಪಡೆದಿದ್ದ ಅಪ್ಪಾಜಿಯ್ಯ ಪ್ರಚಂಡ ಮಾರುತದಂತೆ ಕಾಣಲಾರಂಭಿಸಿದನು. ಸದಾಕಾಲವೂ ಚಿಂತಾ ಕ್ರಾಂತನಾಗಿಯೇ ಇರುತ್ತಿದ್ದನು. ಯಾವ ನುಸಿಯು, ಕ್ರಿಮಿಗಿಂತಲೂ ಕೀಳಾದಪ್ರಾಣಿಯು, ದೇಶಕ್ಕೋಸ್ಕರಲೇ ಜನಿಸಿ ದೇಶಕ್ಕಾಗಿಯೇ ಪ್ರಾಣ ಒಪ್ಪಿಸಲು ಸಿದ್ಧನಾಗಿರುವ ಶ್ರೀ ಕೃಷ್ಣದೇವನ ಪ್ರಾಣಶುಕವನ್ನಪಹರಿಸಲು ಉದ್ಯುಕ್ತನಾಗಿತ್ತೋ ಅದನ್ನು ಜವನನಿಲಯದ ಆತಿಥ್ಯ ಪಡೆಯಲು ಕಳು ಹಿಸಲು ಕಂಕಣಕಟ್ಟಿದನು. ಯಾವ ವಿಷಯದಲ್ಲಿಯೂ ಅಪ್ಪಾಜಿಯು ಚಾಣಕ್ಯನಿಗೆ ಕಡಿಮೆ ಪ್ರತಿಭೆಯುವನಲ್ಲ. ಹೀಗಿರುವಾಗ ಚಾಣಕ್ಯನ ಬೆನ್ನು ಬಿದ್ದ ವಿಜಯದೇವತೆಯು ಅಪ್ಪಾಜಿಯನ್ನು ಮರೆಯುವುದೆಂದರೇನು ?

ನರಸಿಂಗನ ಗುಪ್ತಮಂತ್ರಿ ಚಂದ್ರಶೇಖರನಿಗೆ ಈ ಸುಳಿವು ತಿಳಿಯದಿ ರಲಿಲ್ಲ ಚಂದ್ರಶೇಖರನು ಕುಜ ಯುಕ್ತಿಯಲ್ಲಿ ತ್ರೇತೆಯ ರಾಕ್ಷಸರನ್ನು ಮೀರಿಸುತ್ತಿದ್ದನು. ಹೆಚ್ಚೇನು! ಮಂಗನಂತಿದ್ದ ಆ ಅನಂಗ ವೀರನರಸಿಂಹ ನನ್ನು ಮೂಗುದಾರಹಿಡಿದು ಎಳೆಯುತ್ತಿದ್ದವನು 'ಚಂದ್ರಶೇಖರ'. ಚಂದ್ರ ಶೇಖರನು ಅನಭಿಷಿಕ್ತ ಸಹಜ ಅರಸು. ವೀರನರಸಿಂಹನು ಅಭಿಷಿಕ್ತ ಪಟ್ಟದಗೊಂಬೆ. ಚಂದ್ರಶೇಖರಶಾಸ್ತ್ರಿ ಶುದ್ಧ ವೈದೀಕ. ವೈದೀಕರಿಗನು ಗುಣವಾದ ದುರಾಶೆ; ಆಸೆ ಫಲಿಸದಿದ್ದರೆ ಈರ್ಷೆ. ಶ್ರೀ ಶಾಸ್ತ್ರಿಗಳ ಪೂರ್ವ ಜನ್ಮದ ಪುಣ್ಯಫಲಕ್ಕನುಗುಣವಾಗಿ ಅವರಿಗೆ ಪ್ರಚಂಡ ಪತ್ನಿಯೊಬ್ಬಳಿ ದ್ದಳು. ಆ ಮಹಾತಾಯಿಯ ಆಚಾರ, ಆಕಾರ, ವಚನಗಳು ವರ್ಣನಾತೀತ ವಾಗಿದ್ದವು. ಕಾಳಿದಾಸನೇ ಬದುಕಿದ್ದರೆ ಖಂಡಿತವಾಗಿಯೂ ಮೂಗಿನ

ಮೇಲೆ ಬೆರಳಿಟ್ಟು ಅಚ್ಚರಿಗೊಳ್ಳುತ್ತಿದ್ದನು. 'ಊರೆಲ್ಲಾ ಆಳಿದರೂ ಮನೆ ಹೆಂಡತಿಗೆ ಕಾಸ್ತಾರ' ಎನ್ನುವಹಾಗೆ ಚಂದ್ರಶೇಖರನು ಹೊರಗೆಷ್ಟು ಗಣ್ಯ ಮನುಷ್ಯನಾದರೂ ಮನೆಯ ಮಾರಿಗೆ ದಾಸಾನುದಾಸ; ಪತಿಯಂತೆಯೇ ಈತೆಯ ಆಸೆಗೂ ಅಣೆಕಟ್ಟಿರಲಿಲ್ಲ.

ಅಪ್ಪಾಜಿಯು ಒಳಸಂಚು ನಡೆಸಲಾರಂಭಿಸಿದನು. ಚಂದ್ರಶೇಖರನ ಪತ್ನಿಗೆ ದಿವ್ಯ ಕನಕಾಭರಣಗಳು ಮೂಟೆಮೂಟೆ ಹೋಗಲಾರಂಭಿಸಿತು. ಗೌರಿದೇವಿಯು ಅಪ್ಪಾಜಿಯ ಔದಾರ್ಯಕ್ಕೆ ಬೆರಗಾಗಿ ಹೋದಳು. ಒಂದು ದಿನ ಅಪ್ಪಾಜಿಯು ಆಕೆಯನ್ನು ನೋಡಲು ಹೋದನು.

ಅಪ್ಪಾಜಿ—" ತಾಯಿ, ಬ್ರಾಹ್ಮಣರಗ್ರಗಣ್ಯರಾದ ತಮ್ಮ ಪ್ರಿಯಪತಿಗಳು ನೀಚಕ್ಷತ್ರಿಯ ವೀರನರಸಿಂಹನ ಕಾಲು ನೆಕ್ಕಿಕೊಂಡು ಅವನ ಅಡಿಯಾಳಾಗಿರುವುದು ನನಗೆ ಸಮ್ಮತವಿಲ್ಲ."

ಗೌರಿ—" ಅಪ್ಪಾಜಿಯವರೇ, ಏನುಮಾಡಲಾದೀತು! ನೌಕರಿಗೆ ಸೇರಿದ ಮೇಲೆ ಒಡೆಯನ ದಾಸತ್ವ ಮಾಡಲೇಬೇಕು."

" ಅಮ್ಮಾ, ಆ ಮಾತು ಇತರರ ವಿಷಯಗಳಲ್ಲಿ ಅನ್ವಯಿಸುತ್ತದೆಯೇ ವಿನಾ ತಮ್ಮ ಪತಿಗಳ ವಿಷಯದಲ್ಲಲ್ಲಾ. ಮೊದಲಿಂದಲೂ ಧೀರತನದ ಸ್ವಾತಂತ್ರ್ಯ ಅಭಿಪ್ರಾಯವನ್ನು ಪಡೆದಿರುವ ಅವರು ಕೂಡ ದಾಸರಾಗಿರಬೇಕೇ?"

" ಅಪ್ಪಾಜಿಯವರೇ, ನಾನು ಹೇಳಿದಂತೆ ನಾವು ಸೇವಕರು; ನಾವು ಸ್ವಾತಂತ್ರ್ಯ, ಧೀರತನ ಇವುಗಳಾಲೋಚನೆ ಮಾಡಹತ್ತಿದರೆ ಈಗ ಬರುತ್ತಿರುವ ಸಂಪಾದನೆಗೆ ಮಣ್ಣು ಬೀಳುತ್ತದೆ! 'ಬಡವನಕೋಪ ಅವನ ದವಡೆಗೆ ಮೂಲ' ಎನ್ನುವಹಾಗೆ!"

" ತಾಯಿ, ಈ ವಿಷಯದಲ್ಲಿ ತಾವು ಆಲೋಚಿಸತಕ್ಕ ವಿಷಯ ಒಂದುಂಟು; ವಿಜಯನಗರವನ್ನಾಳುತ್ತಿರುವವರು ಲೆಕ್ಕಕ್ಕೆ ವೀರನರಸಿಂಹನೇ ಆದರೂ ನೈಜವಾಗಿ ಚಂದ್ರಶೇಖರ ಶಾಸ್ತ್ರಿಗಳೇ ಅಲ್ಲವೇ? ಇಂತಹ ಸುಸಮಯವನ್ನು ಉಪಯೋಗಿಸಿಕೊಂಡು ಬ್ರಾಹ್ಮಣ ಸಾಮ್ರಾಜ್ಯವನ್ನು ಸ್ಥಾಪಿಸಿ, ಆ ಚಂದ್ರಾರ್ಕವಾದ ಕೀರ್ತಿಯನ್ನು ಪಡೆಯದೇ ವೃಥಾ ಕಾಲಹರಣಮಾಡುವುದೇ?"—ಎಂದು ಹೇಳಿ ಬೀಳ್ಕೊಂಡನು.

ಆಶಾಪ್ರಪಂಚದ ಸಾಮ್ರಾಜ್ಞಿಯಾದ ಗೌರಿದೇವಿಗೆ ಈ ವಿಜಯನಗರದ ಸಾಮ್ರಾಜ್ಞಿ ಎನಿಸಬೇಕೆಂಬ ಜಾಢ್ಯವು ಪ್ರಬಲವಾಯಿತು. ಅಪ್ಪಾಜಿ ಬಿತ್ತಿದ ವಿಷಬೀಜವು ಬೇರೂರಿತು. ಚಂದ್ರಶೇಖರನಿಗೆ ಮನೆಯಲ್ಲಿ ಅರ್ಧ ಘಳಿಗೆಯೂ ನಿಲ್ಲದಂತಾಯಿತು. "ಹೇಡಿ, ಮತದ್ರೋಹಿ, ದೇವದ್ರೋಹಿ, ದಡ್ಡ" ಎಂಬೀ ಸಹಸ್ರನಾಮಗಳ ಪೂಜೆಯು ಪ್ರತಿದಿವಸವೂ ಆಗುತ್ತಲಿತ್ತು. ಕಡೆಗೊಂದು ದಿನ ಹೆಂಡತಿಯ ಹಾಡಿಗೆ ತಾಳಹಾಕಲು ಅವನು ಒಪ್ಪಿದನು.

೫

ಅರಮನೆಯಲ್ಲಿ ಬಹು ಸಡಗರ; ತೋರಣಗಳೂ, ಧ್ವಜಗಳೂ, ಮೆರೆಯುತ್ತಿದ್ದವು; ಮಂಗಳ ವಾದ್ಯಗಳು ಮೊಳಗುತ್ತಿದ್ದವು. ಜನರ ಆನಂದಕ್ಕೆ ಪಾರವಿಲ್ಲ. ಜಯಘೋಷಗಳು ಗಗನವನ್ನು ಮುಟ್ಟುತ್ತಿದ್ದವು. ಹೊರಗಿನ ವಾತಾರಣವು ಹೀಗಿರುವಾಗ ಅರಮನೆಯೊಳಗೊಬ್ಬ ನವತರುಣನು ಬಹು ಖಿನ್ನನಾಗಿ, ಕಂಬನಿಗಳನ್ನು ಸುರಿಸುತ್ತ ನಿಂತಿದ್ದಾನೆ. ಅವನೆಮುಂಗೆ ದಿವ್ಯ ತೇಜಸ್ವಿಯಾದ ಒಬ್ಬ ಬ್ರಾಹ್ಮಣನು ನಿಂತಿದ್ದಾನೆ. ವಾಚಕರು ಬಹುಶಃ ಬ್ರಾಹ್ಮಣನು ಅಪ್ಪಾಜಿಯೆಂಬುವುದನ್ನೂ, ತರುಣನು ಶ್ರೀ ಕೃಷ್ಣದೇವನೆಂಬುದನ್ನೂ ಅರಿಯದಿರಲಾರರು.

ಅಪ್ಪಾಜಿ—"ಕೃಷ್ಣ, ಏಳುಏಳು; ಇದೇನು ಈ ಚಿಂತೆ! ಪುರಜನರೆಲ್ಲಾ ಹೊರಗೆ ಸೇರಿ ನಿನ್ನ ಮುಖದರ್ಶನದಿಂದ ಪುನೀತರಾಗಿ, ನಿನ್ನ ಸಿಂಹಾಸನಾರೋಹಣವನ್ನು ನೋಡಿ ಕೃತಾರ್ಥರಾಗಬೇಕೆಂದಿದ್ದಾರೆ. ಅವರಿಗೆ ಆಶಾಭಂಗವನ್ನುಂಟುಮಾಡುವುದು ವಿಹಿತವಲ್ಲ."

ಕೃಷ್ಣ—"ಅಪ್ಪಾಜಿಯವರೇ, ನನಗೆ ರಕ್ತದಿಂದ ತೊಳೆಯಲ್ಪಟ್ಟ ಈ ಸಿಂಹಾಸನವು ಬೇಡ; ಅಣ್ಣನನ್ನು ಕೊಂದು ಈ ರಾಜ್ಯವನ್ನು ಸೂರೆಗೊಂಡವನೆಂಬ ಅಪಕೀರ್ತಿಯು ನನಗೆ ಅವಶ್ಯಕವಿಲ್ಲ."

ಅಪ್ಪಾಜಿ—"ಮಗೂ, ರಣರಂಗದಲ್ಲಿ ಪಾರ್ಥನಿಗೊದಗಿದಂತೆ ನಿನಗೆ ಧರ್ಮಸಂಕಟವು ಒದಗಿದೆಯಲ್ಲವೇ? ಮಗೂ, ನಿನ್ನ ಅಣ್ಣನ ರಕ್ತವನ್ನು ಚೆಲ್ಲಿದವನು ನಾನಲ್ಲದೆ ನೀನಲ್ಲ. ಹಾಗಿದ್ದಮೇಲೆ ನಿನಗಪಕೀರ್ತಿ ಹೇಗೆ ತಾನೇ ಬಂದೀತು?"

ಕೃಷ್ಣ—“ ಅಪ್ಪಾಜಿಯವರೇ, ನಾನು ಎಷ್ಟು ಪರಿಶುದ್ಧನಾದರೇನು ? ಜನತೆಯು ನನ್ನ ನೈರ್ಮಲ್ಯದ ಕಡೆಗೆ ನೋಡುವುದೇ ! ಜನಾಪವಾದವು ನನಗೆ ತಪ್ಪುವುದೇ ? ”

ಅಪ್ಪಾಜಿ—“ಕೃಷ್ಣ, ಜನತೆಯ ವಿಶ್ವಾಸವನ್ನು ಸಂಪಾದಿಸುವುದೊಂದೇ ಅರಸನ ಮುಖ್ಯಕಾಂಕ್ಷೆಯಾಗಿರಬೇಕು, ಸಹಜ. ನೀನಾಗಿ ನೀನು ಅಣ್ಣನ ಪ್ರಾಣಕ್ಕೆ ಎರವಾಗಿ, ರಾಜ್ಯಲೋಭಕ್ಕಾಗಿ ಆಸೆಪಟ್ಟವನೇನೂ ಅಲ್ಲ. ಒಂದು ವೇಳೆ ಹಾಗೆ ಪಟ್ಟಿದ್ದರೂ ಅದು ಸತ್ಯಕಾಮವೇ ವಿನಾ ದುಷ್ಕಾಮವಲ್ಲ. ಕೇಳು, ಈ ಜನಾಪವಾದವು ಸೀತೆಯಂತಹ ಲೋಕಮಾತೆಗೇ ತಪ್ಪಲಿಲ್ಲ. ಒಂದು ವೇಳೆ ಜನರು ನಿನ್ನ ಮೇಲೆ ಆರಂಭದಲ್ಲಿ ದುಷ್ಟಾಭಿಪ್ರಾಯಗಳನ್ನು ತಳೆದವರಾದರೂ, ನಿನ್ನ ಉಚ್ಚ ಆಡಳಿತ, ರಾಜ್ಯಧುರಂಧರತ್ವದ ಸದ್ಗುಣಗಳಿಗೆ ಬೆರಗಾಗಿ ಅವುಗಳಿಗಾಗಿ ದಾಸಾನುದಾಸರಾಗಿಹರು. ಮಗೂ, ಕೇವಲ ಸ್ವಾರ್ಥವೇ ಮುಖ್ಯವೆಂದು ರಾವಣನಂತೆ ಭಾವಿಸಿ, ರಾಜ್ಯವನ್ನು ಹೊಲಸು ಮಾಡಿದ್ದ ಅಣ್ಣನು ನಿನಗೆ ಮುಖ್ಯನೋ, ನೀನೇ ಶ್ರೀ ಕೃಷ್ಣಾವತಾರಿಯೆಂದೂ ಕರ್ಣಾಟಕಮಾತೆಗೆ ಸುವರ್ಣಕಿರೀಟವನ್ನು ಹಾಕಲು ಧರೆಗೆ ಬಂದಿರುವ ವೀರಅಭಿಮನ್ಯುವೇ ನೀನೆಂದೂ ಭಾವಿಸಿ ನಿನ್ನ ಸೇವೆ ಮಾಡಲು ಹಾತೊರೆಯುತ್ತಿರುವ ಲಕ್ಷಾಂತರಮಂದಿ ಕನ್ನಡ ಸ್ತ್ರೀಪುರುಷರು ಮುಖ್ಯವೋ—ಈಗ ನಿರ್ಧರಿಸು. ”

ಕೃಷ್ಣದೇವನ ಬಾಯಿಬಂಧಿಸಿತು. ಬಿನ್ನಹಕ್ಕೆ ಬಾಯಿಲ್ಲದಂತಾಯಿತು. ಯೋಚಿಸಿ ಯೋಚಿಸಿ ಅಪ್ಪಾಜಿಯ ಆಜ್ಞೆಯನ್ನು ಅಂಗೀಕರಿಸಿದನು. ಅಂದೇ ಕರ್ಣಾಟಕದ ದಿವಾಕರನು ಅಸಾಧಾರಣವಾದ ಅಮರವಾದ ಶೋಭೆಯಿಂದ ರಾಜಿಸಿದನು. ಆನಂದಸೂಚಕವಾದ ಭೂರಿನಾದಗಳು ಮೊಳಗಿದವು. ಗಗನದೊಡೆಯರು ತಮ್ಮ ಆನಂದ-ಉಲ್ಲಾಸಗಳನ್ನು ಸೂಚಿಸಲಿಕ್ಕಾಗಿ ಪುಷ್ಪವೃಷ್ಟಿಯಂತಹ ಮನೋಹರವಾದ ಹೂಮಳೆಗರೆದರು. ಜನತೆಯ ಜಯಜಯಕಾರದೊಂದಿಗೆ ಶ್ರೀ ಕೃಷ್ಣದೇವರಾಯನು ವಿಜಯನಗರದ ದಿವ್ಯ ಸಮ್ರಾಟನಾದನು

---

# ಸಾವಿತ್ರಿಯ ಸೌಭಾಗ್ಯ (?)



ಸಾವಿತ್ರಿ ಬಹು ಒಳ್ಳೆಯಹುಡುಗಿ. ಚಂದದೊಳ್ಳೆಹೆಣ್ಣು ಅವಳ ಆಟ ಪಾಠ, ಚಮತ್ಕಾರದ ಮಾತುಗಳನ್ನು ಕೇಳುತ್ತಿದ್ದವರಿಗೆ "ಇವಳು ಗಂಡಸಾಗಿ ಹುಟ್ಟಿದ್ದರೆ ಚೆನ್ನಾಗಿತ್ತು" ಎಂದನ್ನಿಸುತ್ತಿತ್ತು. ಈಗಿನ ಕಾಲದಲ್ಲಿ ಹೆಣ್ಣುಮಕ್ಕಳೆಲ್ಲಾ ತಾವು ಗಂಡಸಾಗಿ ಹುಟ್ಟಲಿಲ್ಲವಲ್ಲಾ ಎಂದು ನೊಂದುಕೊಳ್ಳುವರು, ತಮ್ಮ ವಿಧಿಯನ್ನು ದೂಷಿಸುವರು. ಸಾವಿತ್ರಿಯು ಒಂದು ದಿವಸವೂ ಹಾಗೆ ಮಾಡಿದವಳಲ್ಲ. ತನ್ನ ಗೆಳತಿಯರಾರಾದರೂ ನಾಚಿಕೆಗೇಡಾದ ಕೆಲಸವನ್ನು ಮಾಡಿದರೆ "ಇದೇನೆ ಹೀಗೆ ಗಂಡಸಿನಂತೆ ಆಡ್ತಿ, ಚೆನ್ನಾಗಿದೆಯಮ್ಮ" ಎಂದನ್ನುತ್ತಿದ್ದಳು. ಸಾವಿತ್ರಿಗೆ ಬೊಂಬೆಪುಸ್ತಕಗಳೆಂದರೆ ಬಹು ಇಷ್ಟ. ಅದರಲ್ಲಿಯೂ ಸೀತೆ, ಸಾವಿತ್ರಿ, ದಮಯಂತಿಯರಂತಹ ಸ್ತ್ರೀರತ್ನಗಳ ಕಥೆ, ಚಿತ್ರಗಳೆಂದರೆ ಅವಳಿಗೆ ಅನ್ನಾಹಾರಗಳೊಂದೂ ಬೇಕಾಗುತ್ತಿರಲಿಲ್ಲ. ತಾನೂ ಸೀತೆಯಹಾಗಾಗಬೇಕು, ಸೀತೆಯಹಾಗೆ ಪತಿವ್ರತೆಯಾಗಿ, ಹುಟ್ಟಿದ ಮತ್ತು ಸೇರಿದಮನೆಗಳಿಗೆ, ಕೀರ್ತಿ ತರಬೇಕೆಂಬುದೇ ಅವಳ ಅಮೋಘವಾದ ಆಸೆಯಾಗಿದ್ದಿತು. ವಿನೋದಕ್ಕಾಗಿಯಾದರೂ ಯಾರಾದರೂ "ಏನೇ ಸಾತೂ, ನಿನ್ನ ಮುದುಕನಿಗೆ ಕೊಟ್ಟು ಮದುವೆ ಮಾಡ್ತಾರಲ್ಲೇ" ಎಂದರೆ, ಸಾವಿತ್ರಿಯು "ಹೌದಮ್ಮ, ನಮ್ಮ ಬಾಳುನೋಡಿದರೆ ನಿಮಗೆಲ್ಲಾ ನಗುಬರುತ್ತದೆ. ಮುದುಕನೋ ಮೋಟನೋ, ಗಂಡಾನ್ನೋವಸ್ತು ದೇವರಸಮಾನ ಅವರು ಹ್ಯಾಗೇ ಇರಲೀ ನಾವು ಅವರ ಚಾಕರರಂತೆ ಇರುವುದೇ ಧರ್ಮ" ಎಂದು ಗಂಭೀರವಾಗಿ ನುಡಿಯುತ್ತಿದ್ದಳು. ಸಾವಿತ್ರಿಯೊಂದೊಂದು ಕಾಲು ಬಲ್ಲಾಡುತ್ತಿದ್ದ ಮಾತುಗಳನ್ನು ಕೇಳಿದರೆ ಎಲ್ಲರೂ ಬೆಕ್ಕಸ ಬೆರಗಾಗುತ್ತಿದ್ದರು. ಬಾಲ್ಯವೆನ್ನುವುದು ಎಷ್ಟುದಿನವಿರುತ್ತದೆ. ನಮ್ಮ ಕಣ್ಣೆದುರಿಗೆ ಪುಟ್ಟಪುಟ್ಟದಾಗಿ ಆಡಿಕೊಂಡು, ನಮ್ಮನ್ನು ಕಾಡಿಬೇಡುತ್ತಿದ್ದ ಮಕ್ಕಳೇಕೆಲವು ವರ್ಷಗಳಲ್ಲಿ ಮಕ್ಕಳತಾಯಿಯರಾಗುತ್ತಾರೆ.

ಸಾವಿತ್ರಿಯ ದುರದೃಷ್ಟಕ್ಕೆ ಅವಳ ಜಾಣ್ಮೆಯನ್ನು ನೋಡಿ ನಲಿಯುತ್ತಿದ್ದ "ತಾಯಿ"ಯು ತೀರಿಕೊಂಡಿದ್ದಳು. ಅಳುತಳುತ್ತಾ ಮಗಳನ್ನು ಅಪ್ಪಿ "ಕಂದಾ, ನಿನ್ನಾರುಮರೆತರೂ ನಾನುಮರೆಯುವುದಿಲ್ಲ. ನೀನು ನನ್ನನ್ನು ನೋಡುವುದಕ್ಕಾಗುವುದಿಲ್ಲ. ನಾನು ನೋಡುತ್ತಾ ನಿನ್ನಮಂಗಳವನ್ನೇ ಸದಾ ಹಾರೈಸುತ್ತಿರುತ್ತೇನೆ." ಎಂದ ತಾಯಿಯ ಮಾತು ಸಾವಿತ್ರಿಗೆ ಕಣ್ಣಿಗೆ ಕಟ್ಟಿದಂತಿತ್ತು. ಸಾವಿತ್ರಿಯ ತಮ್ಮ, ಪುಟ್ಟು, ಅವಳಿಗಿಂತ ಮೂರು ನಾಲ್ಕು ವರ್ಷಗಳಿಗೆ ಚಿಕ್ಕವನು. ಬಲುತುಂಟ. ಅವನಕಣ್ಣಿಗೆ ತಿಂಡಿ ಬೀಳುವುದೇ ತಡಾ, ಮರುಕ್ಷಣದೊಳಗಾಗಿ ಅದು ಮಾಯವಾಗುತ್ತಿತ್ತು. ಮನೆಯಲ್ಲಿ ತಿಂಡಿಮಾಡಿದರೆ ಭಾಗೀರತಮ್ಮನು ಪುಟ್ಟೂಗೆ ಪ್ರತ್ಯೇಕವಾಗಿ ಒಂದು ಬುಟ್ಟಿ ಇಡುತ್ತಿದ್ದಳು. ಒಂದೊಂದುಸಲ ಪುಟ್ಟುವಿನ ತುಂಟತನವು ಎಲ್ಲೆ ಮೀರಿದಾಗ ಸಾವಿತ್ರಿಯು ತಮ್ಮನನ್ನಪ್ಪಿ "ಪುಟ್ಟೂ, ಅಮ್ಮಹೇಳಿದ್ದು ಮರೆತೆಯಾ" ಎಂದಂದು ಕಣ್ಣೀರುಗರೆಯುತ್ತಿದ್ದಳು. ಯಾರೇನೇ ಅನ್ನಲಿ, ಅಪ್ಪ ಮನಸ್ಸು ಬಂದಷ್ಟು ಗದರಿಸಲಿ, ಸ್ಕೂಲಿನಲ್ಲಿ ಮೇಷ್ಟರು ಬೇಕಾದಷ್ಟುಹೊತ್ತು, ಬೆಂಚಿನಮೇಲೆ ನಿಲ್ಲಿಸಲಿ, ಪುಟ್ಟೂಗೇನೂ ವ್ಯಸನವಾಗುತ್ತಿರಲಿಲ್ಲ. ಆದರೆ ಸಾವಿತ್ರಿ ಕಣ್ಣೀರು ಕರೆಯಿತೆಂದರೆ ಅವನ ಪ್ರಾಣವಾಯುವೇ ಹಾರಿಹೋಗುತ್ತಿತ್ತು. ತನ್ನ ತುಂಟತನ ನೆನಸಿಕೊಂಡು ಸುಮ್ಮನೆ ಅಳುವನು. ಅವತ್ತು ಹೊಟ್ಟೆತುಂಬ ಊಟಕೂಡ ಮಾಡನು. ಸಾವಿತ್ರಿಗಾಗಲೇ ಹನ್ನೊಂದು ತುಂಬುತ್ತಬಂದಿತ್ತು. ನಂಟರಿಷ್ಟರೆಲ್ಲರೂ ವರಾತಹಚ್ಚುತ್ತ ಬಂದರು. ಲಕ್ಷ್ಮಣರಾಯರು ಅಂತಹ ಧೃಡಮನಸ್ವಿಗಳೇನಲ್ಲ. ಈಗಿನಕಾಲದ ವ್ಯವಹಾರವೆಲ್ಲಾ ಗೊತ್ತಿದ್ದರೂ, ಕಂದಾಚಾರದ ಪದ್ಧತಿಯನ್ನು ಬಿಡುವಷ್ಟುಮಾತ್ರ ಧೈರ್ಯವಿರಲಿಲ್ಲ. ಬಾಲ್ಯವಿವಾಹದ ಕೆಟ್ಟಪರಿಣಾಮಗಳು, ಬಾಲವಿಧವೆಯರ ಗೋಳು, ಸಮಾಜದ ಕುಂದುಕೊರತೆಗಳು, ಇವುಗಳವಿಚಾರ ಒಂದೊಂದು ಗ್ರಂಥ ಬರೆಯುವಷ್ಟು ವಿಷಯ ಗೊತ್ತಿತ್ತು. ಆದರೇನು? ಅರಿತಿದ್ದುದನ್ನು ಧೈರ್ಯವಾಗಿ ಮಾಡಿತೋರಿಸುವಷ್ಟು ಧೈರ್ಯಮಾತ್ರ ಇರಲಿಲ್ಲ. ಕಛೇರಿಗೆ ಮೂರು ತಿಂಗಳು ರಜಾತೆಗೆದುಕೊಂಡು ವರಾನ್ವೇಷಣೆಗೆ ಹೊರಟರು. ಮೊದಲೊಂದೆರಡುಕಡೆಗಳಲ್ಲಿ ನಿಷ್ಫಲವಾದರೂ ಕೊನೆಗೆ ಒಳ್ಳೆಯ ವರನನ್ನೇ ಕುದುರಿಸಿಕೊಂಡು ಬಂದರು. ವರನಹೆಸರು ಗೋಪಾಲಸ್ವಾಮಿ. ಉದ್ದಾಳು, ಎಣ್ಣೆ

ಗೆಂಪಿನ ಬಣ್ಣ, ಯಾವಾಗಲೂ ಹಸನ್ಮುಖಿ. ಬಿ. ಎ. ಕ್ಲಾಸಿನಲ್ಲಿ ಓದುತ್ತಿದ್ದ, ಪಿತ್ರಾರ್ಜಿತ ಆಸ್ತಿಯೂ ತಕ್ಕಮಟ್ಟಿಗಿತ್ತು. ಅಣಿಯಾದಗಂಡು, ಅಣಿಯಾದ ಹೆಣ್ಣು. ವರಸಾಮ್ಯವೂ ಚೆನ್ನಾಗಿತ್ತು. "ಹೆಣ್ಣು ಕೊಂಚ ಉದ್ದ ಯಿರಬೇಕಾಗಿತ್ತು. ಪೀಚು" ಎಂದು ಗಂಡಿನಕಡೆಯವರೊಬ್ಬರು ಅಂದುಕೊಂಡರು 'ನಮ್ಮ ಗೋಪೂಗೆ ತಾಯಿಲ್ಲದ ಹೆಣ್ಣು ಯಾಕೆತರಬೇಕು" ಎಂದು ಇನ್ನೊಬ್ಬಾಕೆ ಹೇಳಿದಳು. ಯಾರೇನಂದರೇನು ? ಬೀಗಿತ್ತಿ ಬಲುಜಾಣೆ. ಎಲ್ಲರಿಗೂ ಸಮಾಧಾನಹೇಳಿ, ಎಲ್ಲಾರನ್ನೂ ಒಳ್ಳೆಯದನ್ನಾಗಿಮಾಡಿಕೊಂಡಳು. ವಿವಾಹ ಮಾಘಶುದ್ಧಕ್ಕೆ ನಿಷ್ಕರ್ಷೆ ಆಗಿಹೋಯಿತು. ಮೈಮೇಲಿದ್ದ ದೊಡ್ಡಭಾರ ಇಳಿಯಿತೆಂದು ಲಕ್ಷ್ಮಣರಾಯರು ತಿಳಿದುಕೊಂಡರು

೨

"ಬೇಗಬೇಗ ಒಂದೆರಡು ಉರುಟಣೆ ಹಾಡುಹೇಳಿಮುಗಿಸಿರೇ, ಗಂಡು ಹುಡುಗ ಹಸೇಮೇಲೆ ಎಷ್ಟುಹೊತ್ತು ಕುಳಿತಿರಬೇಕು. ನಿಮ್ಮ ಚೆಲ್ಲಾಟವೆಲ್ಲಾ ಆಮೇಲಾಗಲೀ."

"ಅದು ಹ್ಯಾಗಗತ್ತೆ ಚಿಕ್ಕಮ್ಮ. ನಮ್ಮ ಗೋಪೂಮದುವೆಯೇನೂ ದಿನಾಆಗತ್ಯೆ—ಇವತ್ತಲ್ಲದೆ ನಾವೆಲ್ಲಾ ಎಂದು ಸಂತೋಷಪಡುವುದು. ಒಂದುಗಂಟೆ ಹಿಂಚೇನು ಮುಂಚೇನು ಆಗತ್ತೆ. ಗೋಪೂಗೇ ಇವೆಲ್ಲಾ ಆಸೆ."

"ಅದೇನೇ ಲಲಿತಾ—ಗೋಪೂ ಅಂತಾ ನನ್ನ ವಿಚಾರಮಾತನಾಡ್ತಾಯಿದ್ದೀ."

"ಏನೂ ಇಲ್ಲಪ್ಪಾ, ಚಿಕ್ಕಮ್ಮ, 'ಗೋಪೂನ್ನೋಡೇ-ಹೆಂಡತಿಹತ್ತಿರ ಆಗಲೇ ಮಾತ್ನಾಡ್ತಾಯಿದ್ದಾನೆ, 'ಅಂವಳು' ನಾನು ಸುಳ್ಳು ಅಂದೆ ಅಷ್ಟೇ ಗೋಪಣ್ಣ."

"ನೀನು ಯಾವಾಗ್ಲೂ ಹೀಗೆ ಹಾಸ್ಯಮಾಡ್ತಿಯಮ್ಮ—ಬೇಗ ಆರತಿಯೆತ್ತೀಯೋ ನಾನು ಹೊರಟುಹೋಗಲೋ ?"

ಎಂದು ಗೋಪಣ್ಣಕೊಂಚ ಬೆದರಿಸಲು "ಉರುಟಾಣೆಗೆ ಕರೆವೇನಾ...." ಎಂದು ಯಾರೋ ಮೊದಲುಮಾಡಿದರು. ಯಾರಾದರೂ ಮೊದಲುಮಾಡುವುದೇತಡ, ಆಮೇಲೆ ಹೆಣ್ಣುಮಕ್ಕಳ ಹಾಡಿನ ಪೈಪೋಟಿ ನಿಲ್ಲಿಸುವುದೇ ಕಷ್ಟವಾಗುತ್ತದೆ. ಈವೇಳೆಗೆ ಗೋಪೂ ಅಜ್ಜಿ, ನಾಗತ್ತೆ "ನಂಕೊಂಚ

ದಾರಿಬಿಡ್ರಿ. ಗಂಡೂ ಹೆಣ್ಣೂ ಹಸೇಮೇಲೆ ಕುಳಿತಿರೋದು ನೋಡಿ ಸಂತೋಷಪಡ್ತೀನಿ " ಎಂದಂದದ್ದು ಕೇಳಿಸಿತು. ಅಜ್ಜಿಕಣ್ಣಿಯು ವಧೂವರರನ್ನು ನೋಡಿ ಸಂತೋಷಪಟ್ಟಳು. ಬಾಯಿನೋಯೋತನಕ ಹರಿಸಿದಳು. ಇನ್ನೂ ಹಾಡಿನ ಪೋಟಾಪೋಟಿಯೂ ನಡೆಯುತ್ತಲೇ ಇದ್ದಿತು. ನಾಗತ್ತೆ ಹೆಂಗಳಗುಂಪುನೋಡಿ "ತಡಿರ್ರೀಸ್ವಲ್ಪ, ನಿಮ್ಮ ಕಿರ್ಲಾಟ ಇದ್ದೇಇದೆ, ನನ್ನ ಕಂದ ಹಾಡಿದ್ದು ಸ್ವಲ್ಪಕೇಳೋಣ" ಎಂದು ಸಾವಿತ್ರಿಯಕಡೆತಿರುಗಿ "ನೀನೊಂದು ಹೇಳುತಾಯಿ" ಎಂದು ಉಪಚಾರವಾಗಿ ಅಂದಳು. ನಾಗಜ್ಜಿ ಹೇಳಿದಮಾತು ಗೋಪುವಿಗೆ ಆನಂದವನ್ನುಂಟುಮಾಡಿತು ಸಾವಿತ್ರಿಯು ಮೆಲ್ಲಗೆ ಶೃತಿಹಿಳಿದು " ಕರುಣಾಕರನೀನೆಂಬುವದೇಕೋ—ಭರವಸೆಯಿಲ್ಲೆನಗೆ" ಎಂದು ಹಾಡಿದಳು. ಅಂದು ಹಾಡಿದಹಾಗೆ ಅವಳು ಇನ್ನೆಂದೂ ಹಾಡಿರಲಿಲ್ಲವೆಂದು ಎಲ್ಲರ ಅಭಿಪ್ರಾಯ. ಸಾವಿತ್ರಿಯ ಕಣ್ಣುಗಳಲ್ಲಿ ಅಶ್ರುಧಾರೆಗಳು ತುಂಬಿದ್ದವು. ಗೋಪುವಿನ ಕಣ್ಣುಗಳಿಂದ ಆನಂದಾಶ್ರುಗಳುದುರಿದುವು. ಪಾಪ! ಅವಳ ಹೃದಯದಲ್ಲಿದ್ದುದು ಅಲ್ಲಿದ್ದವರಿಗೆ ಹೇಗೆ ಗೊತ್ತು? ಹಾಡುಮುಗಿಸಿದೊಡನೆಯೇ " ಯಾಕಕ್ಕಾ ಅಳುತ್ತಿದ್ದೀ" ಎಂದುಯಾರೋ ಕಿವಿಯಲ್ಲಂದ ಹಾಗಾಯಿತು. ಸಾವಿತ್ರಿಯು ಎಡಕ್ಕೆತಿರುಗಿ ಪುಟ್ಟುವಿಗೆ ಮೆಲ್ಲನೆ " ಏನೂಇಲ್ಲ, ಪುಟ್ಟೂ, ನಾಗತ್ತೆಯ ಪ್ರೀತಿ ಅಮ್ಮನಜ್ಞಾಪಕ ತಂದಿತು" ಎಂದಳು.

ಮದುವೆಯು ಎಂಟುದಿವಸವೂ ವಿಜೃಂಭಣೆಯಿಂದ ನಡೆಯಿತು. ಎಲ್ಲರೂ ತೃಪ್ತರಾದರು. ಬೀಗರಂತೂ ಸುಮ್ಮನೆ ಹಿಗ್ಗಿಹೋದರು. ಗೋಪುವಿನ ಆನಂದಕ್ಕೆ ಪಾರವೇಇಲ್ಲ. ಮರೆತುಹೋಗಿದ್ದ ಸ್ನೇಹಿತರನ್ನೆಲ್ಲಾ ಕರೆಸಿಕರೆಸಿ ತಿಂಡಿಹಾಕಿಸಿ ಕಳುಹಿಸುತ್ತಿದ್ದ. ಜೋಯಿಸರುಕೂಡ " ಈ ಮದುವೆಯಲ್ಲಿ ಲಾಡು, ಚಿರೋಟಿ ತಿಂದಹಾಗೆ ಇನ್ನೆಲ್ಲಿಯೂ ತಿನ್ನಲಿಲ್ಲವಯ್ಯಾ" ಎಂದು ಶಹಬಾಸ್‌ಗಿರಿಕೊಟ್ಟುಬಿಟ್ಟರು. ಆದರೆ ಪುಟ್ಟುವಿನ ಮುಖದಲ್ಲೇಕೋ ಹರ್ಷಸೂಚನೆಯಿರಲಿಲ್ಲ. ಅಕ್ಕನನ್ನು ತಾನಗಲುವ ಕಾಲಸಮೀಪಿಸಿತೆಂದು ಅವನು ತಿಳಿದನೇನೋ ...ಇಲ್ಲಾ...ಇಂತಹ ಸಂತೋಷವನ್ನು ನೋಡಿ ಎಲ್ಲರಗಿಂತ ಹೆಚ್ಚಾಗಿ ಹಿಗ್ಗಲು " ಅಮ್ಮ ಬದುಕಿಲ್ಲವಲ್ಲಾ" ಎಂದು ಚಿಂತಿಸಿದನೇನೋ ?

೩

ಲಕ್ಷ್ಮಣರಾಯರು ವಯಸ್ಸಿನಲ್ಲಿ ಚಿಕ್ಕವರಾಗಿದ್ದಾಗ್ಯೂ ಆಗಲೇ ಅವರಿಗೆ ಸಂಸಾರದಲ್ಲಿ ಜಿಗುಪ್ಸೆಹುಟ್ಟುತ್ತ ಬಂದಿತ್ತು. ಕಛೇರಿ ದುಡಿತದಿಂದ ದಣಿದು ಮನೆಗೆಬಂದರೆ ಏನನ್ನೂ ಅರಿಯದ ಎರಡು ಹಸುಗೂಸುಗಳು. ಅವುಗಳಜೊತೆಯಲ್ಲಿ ಸುಖದುಃಖ ಮಾತನಾಡುವುದಕ್ಕಾಗುತ್ತದೆಯೇ-ಸರಸವಾಡುವುದಕ್ಕಾಗುತ್ತದೆಯೇ, ಯಾವುದೂ ಸಾಧ್ಯವಿಲ್ಲ ಮನೆಯಲ್ಲಿ "**ಹೆಂಡತಿ**" ಅನ್ನುವ ವಸ್ತುವಿಲ್ಲದಿದ್ದಮೇಲೆ ಅದು ಮನೆಯೇ ಅಲ್ಲವೆನಿಸಿತು. ಸಾವಿತ್ರಿಯು ಇನ್ನೂ ಚಿಕ್ಕಹುಡುಗಿ. ಪುಟ್ಟು ಪಾಠಶಾಲೆಗೆ ಹೋದಕಾಲದಲ್ಲಿ ಅವಳೊಬ್ಬಳೇ ಹೊತ್ತು ಕಳೆಯುವುದು ಹೇಗೆ? ಮನೆಯಲ್ಲಿ ಯಜಮಾನ್ಯವಹಿಸಿ ಹೆಂಗಸರಾದವರು ಯಾರಾದರೂ ನಿಂತಹೊರತೂ ಸಂಸಾರ ಸುಸೂತ್ರವಾಗಿ ನಡೆಯುವುದು ಹೇಗೆ? ಈ ಇಬ್ಬರಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವರಾರು? ಮನೆಯಲ್ಲಿ ಅನಿವಾರ್ಯಗಳು ಸಂಭವಿಸಿದರೆ ದಿಕ್ಕಾರು! ಎಲ್ಲಕ್ಕಿಂತಲೂ ಮುಖ್ಯ "ನನ್ನ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವರಾರು"? ಸಾವಿತ್ರಿಯು ಈಗ ಇನ್ನೂ ಹುಡುಗಿ. ವಯಸ್ಕಳಾದಮೇಲೆ ಗಂಡನಮನೆಗೆ ಹೋಗಿಬಿಡುವಳು. ಪುಟ್ಟುವು ಇನ್ನೂ ಮಗು. ಅವನು ದೊಡ್ಡವನಾದಮೇಲೆ ಅವನ ಹವ್ಯಾಸಗಳೇ ಅಧಿಕವಾಗುವವು. ಈಗಿನಕಾಲದ ಹುಡುಗರಲ್ಲಿ ಪಿತೃಭಕ್ತಿ, ಪಿತೃಸೇವಾಸಕ್ತಿಗಳ ವಿಚಾರ ಸ್ವಲ್ಪ ಅನುಮಾನವೇ! ನೆಂಟರಿಷ್ಟರು,-ಅವರನ್ನು ಎಷ್ಟುದೂರದಲ್ಲಿಟ್ಟಿದ್ದರೆ ಅಷ್ಟು ಅನುಕೂಲ. ನಾನೇ ಒಂದುವೇಳೆ ಕಾಹಿಲೆ ಕಸಾಲೆ ಬಿದ್ದರೆ ನನಗೆ ಗತಿಯಾರು"? ಎಂಬೀಬಗೆಯ ಆಲೋಚನೆಗಳು ಒಂದೊಂದಾಗಿ ರಾಯರ ಮನಸ್ಸಿಗೆ ಹೊಳೆಯಲಾರಂಭಿಸಿದವು ಈ ಎಲ್ಲವ್ಯಾಧಿಗಳಿಗೂ ಉತ್ತಮ ಕನ್ಯೆಯನ್ನು ಹುಡುಕಿ ಪುನಃ ಮದುವೆಯಾಗುವುದೊಂದೇ ಉತ್ತಮ ಔಷಧವೆಂದು ರಾಯರಿಗೆ ತೋರಿಬಂತು. ಮದುವೆಗೆ ಸನ್ನಾಹಮಾಡಲಾರಂಭಿಸಿದರು. **ಸಮಾಜವೆಂಬ ಹೆಣ್ಣುಮಾರುವ ಅಂಗಡಿಯಲ್ಲಿ ಲಕ್ಷ್ಮಣರಾಯರಂತಹ ಅನುಕೂಲಸ್ಥರಿಗೆ ತಕ್ಕಪದಾರ್ಥ ದೊರೆಯುವುದು ದುರ್ಲಭವೇ?** ತುಸುಪ್ರಯಾಸದಲ್ಲಿಯೇ ಒಂದು ಛತ್ರದಲ್ಲಿ ಒಂದೇದಿನದ ಮದುವೆಯು ಆಗಿಯೂಹೋಯಿತು. ಸುಬ್ಬಮ್ಮನಿಗೆ (ರಾಯರ

ಹೊಸ ಹೆಂಡತಿ,) ವಯಸ್ಸು ಹನ್ನೆರಡೇ ಆಗಿದ್ದರೂ, ಒಳ್ಳೆ ಬೆಳೆವಳಿಗೆಯಾಗಿದ್ದಳು. ನೋಡುವುದಕ್ಕೆ ಕುರೂಪಿಯೇನಲ್ಲ. ಆದರೆ ಸಾವಿತ್ರಿಯ ಹಾಗೆ ತೆಳ್ಳಗೆಬೆಳ್ಳಗೂ ಇರಲಿಲ್ಲ. ಓದುಬರೆಯಲಿಕ್ಕೆ ಅಲ್ಪ ಸ್ವಲ್ಪಮಾತ್ರ ಬರುತ್ತಿತ್ತು. ಸಿಡುಕುಮಾತ್ರ............ಯಾರಾದರೂ "ಏನೇಸುಬ್ಬೀ, ಹೆರಳುಯಾಕೆ ಇನ್ನೂ ಹಾಕ್ಕೊಂಡಿಲ್ಲ" ಯಂದರೆ "ನಾನೇನೂ ನಿನ್ನಹಾಗೆ ಕುಣಿಯೋಕೆ ಹೋಗಬೇಕಾಗಿಲ್ಲ" ಎನ್ನೋಬುದ್ಧಿ. ಸುಬ್ಬೀಗೆ ತಂದೆ ಇರಲಿಲ್ಲ. ತಾಯಿ ಗೌರಮ್ಮನೇ ಎಲ್ಲಾ ನೋಡಿಕೊಳ್ಳುತ್ತಿದ್ದಳು. ಗೌರಮ್ಮ ಒಳ್ಳೇ ಘಟ್ಟಗಿತ್ತಿ. ನಾಲ್ಕಾಳುಮಾಡೋ ಕೆಲಸವನ್ನು ತಾನೇ ಸಲೀಸಾಗಿ ಮಾಡುತ್ತಿದ್ದಳು. ಸುಗ್ಗಿಯಕಾಲದಲ್ಲಿ ಗದ್ದೆಗೆ ಹೋಗಿ ಒಂದೂ ಕಾಳೂ ಭತ್ತಬಿಡದಹಾಗೆ ವಸೂಲ್ಮಾಡಿಕೊಂಡ ಬರುತ್ತಿದ್ದಳು. ಗೌರಮ್ಮನ ಗಂಟಲೆಂದರೆ ಲೋಕಪ್ರಸಿದ್ಧಿ. ಒಂದುಸಲ ಸಂತೇಬಾಚಹಳ್ಳೀಗೆ (ಗೌರಮ್ಮನ ಊರು) ಅಮಲ್ದಾರರು ಜಮಾಬಂದಿಗೆ ಬಂದಾಗ ಊರಮುಂದಲಿನ ಕೆರೆಯ ಬಳಿಗೆ ಬಂದರಂತೆ. ಪಾಪ! ಹತ್ತುಹನ್ನೆರಡುಮೈಲಿ ಕುದುರೆಯಮೇಲೆ ಒಂದಿದ್ದ ಆಯಾಸ, ದಾಹ. ಆಗ ಪಕ್ಕದಲ್ಲಿದ್ದ ತೆಂಗಿನತೋಟ ನೋಡಿ "ಶೇಕದಾರರೇ ಎಳನೀರು ಚೆನ್ನಾಗಿದೆಯಲ್ಲಾ" ಎಂದರಂತೆ. ಉಪಕರಣೆ ತೊಳೆಯುತ್ತಿದ್ದ ಯಾರೋ ಮುಡಿ ಹೆಂಗಸು "ಯಾರೋ ಅದೂ—ಎಳ್ನೀರಿನ ವಿಚಾರ ಮಾತಾಡೋದು—ಮೈಮೇಲೆ ಜ್ಞಾನಜ್ಞೇನ ಇದೆಯೋ" ಎಂದು ಘರ್ಜನೆ ಮಾಡಿದರಂತೆ. ಅಮಲ್ದಾರರು ಪೆಚ್ಚಾಗಿ ಹೋದರು. ಪ್ರಯಾಣದ ಆಯಾಸ, ಬಿಸಲಿನ ಬೇಗೆಯಿಂದ ದಾಹ, ಜೊತೆಗೆ ಈ ಸಿಡಿಲು ಬಡಿತ !! ಸ್ವಲ್ಪ ಧೈರ್ಯತಂದುಕೊಂಡು ಮೆಲ್ಲಗೆ "ಶೇಕದಾರರೇ ಯಾರು ಈ ಮಹಾತಾಯಿ ಎಂದು ಕೇಳಲು ಅವರು ಜೀವ ಭದ್ರವಾಗಿ ಹಿಡಿದುಕೊಂಡು, ಅಮಲ್ದಾರರ ಕಿವಿಹತ್ತಿರ ಬಂದು "ಸ್ವಾಮಿ, ನಾನು ತಮಗೆ ಮೂರು ವರ್ಷದ ಕಂದಾಯದ ಬಾಕಿ ವಿಚಾರ ಅರಿಕೆಮಾಡಿಕೊಂಡಿದ್ದೆನಲ್ಲಾ ಆ ಗೌರಮ್ಮನೇ ಈಕೆ. ಈ ತೋಟ ಅವಳದೇ ಸ್ವಾಮಿ" ? ಎಂದು ಉತ್ತರ ಕೊಟ್ಟರಂತೆ. ಅಮಲ್ದಾರರು ಏಳುವುದನ್ನೂ ಬೀಳುವುದನ್ನೂ ನೋಡದೆ ನಾಗಾಲೋಟದಲ್ಲಿ ಕುದುರೆಯನ್ನೋಡಿಸಿಕೊಂಡು ತಾಲ್ಲೂಕು ಕಛೇರಿ ಸೇರಿದರಂತೆ. ಊರಿನವರೆಲ್ಲಾ ಈ ವಿಚಾರ ನೆನಸಿಕೊಂಡು ಮೂರುತಿಂಗಳು

ನಕ್ಕರು. ಮುಂದೆ ಬಂದ ಅಮಲ್ದಾರರುಗಳು ಕೂಡ "ಗೌರಮ್ಮ" ಎನ್ನುವ ಹೆಸರು ಕೇಳಿದ ಕೂಡಲೆ ಗಡಗಡ ನಡುಗುತ್ತಿದ್ದರು.

"**ಹಿಟ್ಟು ಹಳಸಿತ್ತು-ನಾಯಿ ಹಸಿದಿತ್ತು**" ಎನ್ನುವಗಾದೆ ಇಲ್ಲಿ ಸರಿಹೋಗಿತು. ಮದುವೆಯಾದ ಕೆಲವು ದಿವಸಗಳಲ್ಲಿಯೇ ತಾಯಿ ಮಗಳಿಬ್ಬರೂ ಲಕ್ಷ್ಮಣರಾಯರ ಮನೆ ಸೇರಿದರು. ಯಾಜಮಾನ್ಯವನ್ನು ಗೌರಮ್ಮನೇ ವಹಿಸಿದಳು. ಉಗ್ರಾಣದ ಬೀಗದಕೈ ತಾಯಿ ಕೈಯಲ್ಲಿ, ಖಜಾನೆ ಬೀಗದಕೈ ಮಗಳ ಕೈಯಲ್ಲಿ. ಅಂತೂ ಲಕ್ಷ್ಮಣರಾಯರ ಸಂಸಾರವು ಪೂರ್ಣ ಹುರುಪಿನಿಂದ ಹೊಸದಾಗಿ ಆರಂಭವಾಯಿತು. ಲಕ್ಷ್ಮಣರಾಯರು ಸರಳ ಸ್ವಭಾವದವರು. ಠಕ್ಕು ಮೋಸ ಇವುಗಳನ್ನು ಕನಸಿನಲ್ಲಿಯೂ ಕಾಣರು. ಆದ್ದರಿಂದ ಅವರಿಗೆ ಅಸುಖ, ಅಸಂತೋಷಗಳಿಗೆ ಅವಕಾಶವೇ ಇರಲಿಲ್ಲ. ಹೊಸ ಹೆಂಡತಿ ಕಂಡರಂತೂ ಪ್ರಾಣ. ಲಕ್ಷ್ಮಣರಾಯರಿಗೆ ಮೊದಲನೆಯ ಮದುವೆಯಾದಾಗ ವಯಸ್ಸು ೧೪. ತಂದೆತಾಯಿಗಳ ಬಲವಂತಕ್ಕೆ ಏನೇನು ಶಾಸ್ತ್ರಾದಿಗಳಾಗಬೇಕೋ ಎಲ್ಲಾ ಆಗ ಜೀವಯಂತ್ರದಂತೆ ಮಾಡುತ್ತಿದ್ದರು. ಈಗಲಾದರೋ ಹಾಗಲ್ಲ. ಒಳ್ಳೆಯ ವಯಸ್ಸು, ಸಂಪಾದನೆಯೂ ಚೆನ್ನಾಗಿದೆ. ಚಿಕ್ಕಪುಟ್ಟ ಹೆಂಡತಿ. ಇನ್ನೇನು ಬೇಕು? ಸುಖದ ತುದಿಗೇರಿರುವೆನೆಂದೇ ಅವರ ಹೆಮ್ಮೆ. ಸಾವಿತ್ರಿ ಪುಟ್ಟು ಇವರಲ್ಲಿದ್ದ ಪ್ರೇಮವು ಕೊಂಚವೂ ಕಡಿಮೆಯಾಗಿರಲಿಲ್ಲ. ತಾವು ಮದುವೆಯಾದುದೂ ಈ ಹಸುಮಕ್ಕಳಾಗಿಯೇ ಎಂದು ಅವರ ಭಾವನೆ. ಮನೆಗೇನಾದರೂ ತಿಂಡಿ ತಂದರೆ ಸಾವಿತ್ರಿ ಪುಟ್ಟು ಇವರಿಗೆ ಕೊಟ್ಟು ಮಿಕ್ಕದ್ದೇ ನೂತನ ಗೃಹದೇವತೆ ಗರ್ಪಣೆ. ಒಂದೊಂದು ವೇಳೆ ಇದು ಗಂಡಹೆಂಡಂದಿರಲ್ಲಿ ಪ್ರೇಮ ಕಲಹವನ್ನು ಹುಟ್ಟಿಸುತ್ತಿದ್ದಿತು. "ಆ ಮಕ್ಕಳು ತಿಂದು ಮಿಕ್ಕಿದ್ದೇನೂ ನನಗೆ ಬೇಡ" ಎಂದು ಸುಬ್ಬಿ ಧಿಕ್ಕರಿಸುವುದಕ್ಕೆ, ಲಕ್ಷ್ಮಣರಾಯರು ಆ ದಪ್ಪಗಲ್ಲವನ್ನು ಹಿಡಿದು "ಹಾಗೆಲ್ಲಾ ಅನ್ನಬಾರದು ರತ್ನಾ, ಅವರೆಷ್ಟಾದರೂ ಮಕ್ಕಳು" ಎಂದು ಅಂಗಲಾಚುವುದಕ್ಕೆ! ಸುಬ್ಬಿ-ಸುಳ್ಳು ಕೋಪವನ್ನು ನಟಿಸುತ್ತಾ "ಎಷ್ಟಾದರೂ ಮೊದಲು ಹೆಂಡತಿ, ಅವಳ ಮಕ್ಕಳಮೇಲೇ ಮಮತೆ, ನಮ್ಮನ್ನು ಕೇಳುವರಾರು" ಎಂದು ಬಿರುಸಾಗುವುದು. ಲಕ್ಷ್ಮಣರಾಯರು ಹೆಂಡತಿಯ ಕೈಹಿಡಿದು, "ನೋಡಿದೆಯೋ ಸುಳ್ಳುಹೇಳುತ್ತೀಯಲ್ಲಾ ನೀನೇ

ಹೇಳು ಮುದುಕರಿಗೆ ಯಾರಮೇಲೆ ಹೆಚ್ಚು ವಿಶ್ವಾಸ; ಹೋದ ಹಳೆಯ ಹೆಂಡತಿಯ ಮೇಲೋ ಇರೋ ಹೊಸ ಮುದ್ದಾದ ಪುಟ್ಟ ಹೆಂಡತಿಯ ಮೇಲೋ?" ಎಂದು ಲಾಪ್ಸೆಂಟು ಹಾಕಿದೊಡನೆಯೆ ಆ ಕೋಪತಾಪಗಳೆಲ್ಲಿ ಹಾರಿಹೋಗುತ್ತಿದ್ದುವೋ ? ಇಬ್ಬರೂ ಕ್ಷಣಕಾಲ ಇಹ ಪ್ರಪಂಚವನ್ನೇ ಮರೆಯುತ್ತಿದ್ದರು. ಆಲಿಂಗನದ ಉದ್ವೇಗ ಹರಿದಮೇಲೆ, ಸಮಯದ ಮಹತ್ವವನ್ನರಿತಿದ್ದ ಸುಬ್ಬಿ, ತಲೆಬಾಗಿ, ಕಾಲಿನ ಹೆಬ್ಬೆರಳಿನಿಂದ ನೆಲವನ್ನು ಕೆದಕುತ್ತಾ, ಎಳೆದೆಳೆದು "ಹಾಗಾದರೆ ಈಸಲ ತಪ್ಪದೆ ವಜ್ರದ ಮೂಗುಬೊಟ್ಟು......" ಎಂದು ಹೇಳಿದೊಡನೆಯೆ "ಸಂಬಳ ಬರಲಿ ತಡೀ ನಿಂಗೇ ಗೊತ್ತಾಗುತ್ತದೆ" ಎಂಬ ಉತ್ತರ ಬರುತ್ತಿತ್ತು. ಹೀಗೆ ಈ ಹೊಸ ದಂಪತಿಗಳು ಹೊತ್ತು ಕಳೆಯುತ್ತಿತ್ತು. ಹನ್ನೊಂದು ಘಂಟೆಯ ವೇಳೆಯಾಗುತ್ತ ಬಂದ ಹಾಗೆಲ್ಲ ಲಕ್ಷ್ಮಣರಾಯರ ಮನದಲ್ಲಿ ದುಃಖವೇರುತ್ತಿತ್ತು. "ಏನು ಹಾಳು ಆಫೀಸೋ, ನಾಲ್ಕು ಘಳಿಗೆ ಸುಖವಾಗಿರೋಣಾಂದ್ರೆ ಮಾರ್ಗವಿಲ್ಲ" ಎಂದು ಬಯ್ದುಕೊಂಡು ಕಛೇರಿಗೆ ಹೋಗುತ್ತಿದ್ದರು. ಮನಸ್ಸನ್ನು ಮನೆಯಲ್ಲೇ ಮರೆಯುತ್ತಿದ್ದರೆಂಬುವುದರಲ್ಲಿ ಯಾವ ಸಂದೇಹವೂ ಇಲ್ಲ. ಕಛೇರಿಯು ಮುಗಿಯುವುದೇ ತಡ, ಬೋನಿನಿಂದ ತಪ್ಪಿಸಿಕೊಂಡ ಹುಲಿಯೋ !!!

೪

ಆದರೀ ಸುಖಸಂಪತ್ತು ಹೆಚ್ಚು ಕಾಲವಿರಲಿಲ್ಲ. ಸಾವಿತ್ರಿಗೂ ಅವರ ಚಿಕ್ಕಮ್ಮನಿಗೂ ಅನ್ಯೋನ್ಯತೆಯು ಬೆಳೆಯುತ್ತ ಬರಲಿಲ್ಲ. ಸಾವಿತ್ರಿಯು, ತನ್ನ ಪತಿಯ ಪ್ರೇಮ ಭಂಡಾರವನ್ನು ಸುಲಿಗೆ ಮಾಡಿಬಿಡುವಳು, ಎಂಬುದೇ ಸುಬ್ಬಿಯ ಭಯ. ಈ ಪ್ರೇಮ ಸಮರದಲ್ಲಿ ತನಗೆ ಪ್ರಾಶಸ್ತ್ಯ ಕಡಿಮೆಯಾಗುವುದೆಂದೇ ಅವಳ ಶಂಕೆ. ಸಾವಿತ್ರಿಯು ಏನನ್ನೂ ಅರಿಯದ ಹಸುಬಾಲೆ. ತನ್ನ ತಾಯಿಯಲ್ಲಿಟ್ಟಿದ್ದ ಮಮತೆಯನ್ನು ಸುಬ್ಬಿಯಲ್ಲಿರಿಸದಿದ್ದರೂ ಒಮ್ಮೆಯೂ ಅವಳ ಮನನೋಯುವಂತೆ ನಡೆಯಳು. ಚಿಕ್ಕಮ್ಮನು ತನಗೆ ಕಮ್ಮಿ ತಿಂಡಿ ಕೊಟ್ಟು ತಾನೇ ಹೆಚ್ಚಾಗಿ ತಿಂದರೆ ಅಸೂಯೆ ಪಡಳು; ಚಿಕ್ಕಮ್ಮನು ಬಗೆಬಗೆಯ ಒಡವೆಗಳನ್ನು ಧರಿಸಿ ತನ್ನನ್ನು ಕರೆದುಕೊಳ್ಳದೆಯೇ ಅರಿಸಿನಕುಂಕುಮ ಸಮ್ಮೇಳನಗಳಿಗೆ ಹೋದರೆ ಅವಳಮೇಲೆ ತಂದೆಗೆ ಚಾಡಿ ಹೇಳಳು. ಆದರೆ ಪುಟ್ಟುವನ್ನು ನಿಷ್ಕಾರಣವಾಗಿ ಬಯ್ದು ಹೊಡೆದರೆ ಕೆಣ

ಕಿದ ಫಣಿಯಂತೆ ಕೆರಳಿ ಚಿಕ್ಕಮ್ಮನಿಗೆ ವಿವೇಕ ಹೇಳುತ್ತಿದ್ದಳು. ಆದರೇನು? 'ವಿವೇಕವೆಂಬ ಪರವಸ್ತುವನ್ನು ಸ್ವೀಕರಿಸುವುದಿಲ್ಲ' ಎಂದು ಶಪಥಮಾಡಿಯೇ ಸುಬ್ಬಿಯು ಹುಟ್ಟಿದ್ದಾಗ!! ಒಂದು ದಿನ, ಗೌರಮ್ಮನು ಒಳ್ಳೆಯ ಕೆನೆ ಮೊಸರು ಬೆರಸಿ, ತುಂಬಾ ಕಾಯಿ ತುರಿದುಹಾಕಿ ಒಂದು ಬಟ್ಟಲಲ್ಲಿ ಅವಲಕ್ಕಿ ಮೊಸರನ್ನು ಕಲಸಿಟ್ಟಿದ್ದಳು. ಅಂದು ಏಕಾದಶಿ. ಮೊಸರಿನಲ್ಲಿ ಚೆನ್ನಾಗಿ ನೆನೆದಿದ್ದ ಈ ಅವಲಕ್ಕಿಯು ಎಂತಹವನ ನಾಲಿಗೆಯನ್ನೂ ಕೆಣಕದೆ ಬಿಡುತ್ತಿರಲಿಲ್ಲ. ಯಾರಿಗೂ ಕಾಣದಿರಲೆಂದು ಮುದುಕಿಯು ಅದನ್ನು ಅಟ್ಟದಮೇಲಿಟ್ಟು ಮೇಲೊಂದು ಬೆತ್ತದ ಮಡೀಪೆಟ್ಟಿಗೆಯನ್ನು ಮುಚ್ಚಿದ್ದಳು. ಪುಟ್ಟು ಆಕಸ್ಮಾತ್ತಾಗಿ "ಪಿಲ್ಲಿ" ಯನ್ನು ಹುಡುಕಿಕೊಂಡು ಅಟ್ಟಕ್ಕೆ ಹೋದ ಪಿಲ್ಲಿಯ ಅವಾಂತರದಲ್ಲಿ ಬುಟ್ಟಿಯು ದೂರಬಿತ್ತು— ಕೆಳಗಿದ್ದ ಈ ತಿಂಡಿಯು ಅವನ ಕಣ್ಣಿಗೆ ಬಿತ್ತು. ಮೊದಲೇ ತಿಂಡಿಪ್ರಿಯ!! ಆದೂ ಇಂತಹ ಮೊಸರನ್ನು ಕಂಡು ಎಷ್ಟೋದಿನವಾಗಿತ್ತು. ಬಟ್ಟಲಿನಲ್ಲಿ, ಅವಲಕ್ಕಿ ಮೊಸರಿನ ಗುರುತು ಸಹಾ ಕಾಣದಂತೆ ತಿಂದುಬಿಟ್ಟ. ಆದರೂ ಜಾಣ, ಅಜ್ಜೀಗೆ ಗೊತ್ತಾದರೆ ತನ್ನನ್ನು ಭೂಗತಮಾಡಿಬಿಡುತ್ತಾಳೆಂದು ನೆನೆದು "ಪಿಲ್ಲಿ" ಬಾಯಿಗಷ್ಟು ಮೊಸರೂ, ಕಾಲಿಗಷ್ಟು ಮೊಸರೂ ಬಳಿದು ಅಟ್ಟವೆಲ್ಲಾ ತಿರುಗಾಡಿಸಿ ತೃಪ್ತನಾಗಿ, ಅಟ್ಟದಿಂದಿಳಿಯ ಹೊರಟ—ಎದುರಿಗೇ ಗೌರಮ್ಮ ಬಂದು ನಿಂತಳು.

"ರಾಯ್ರು ಮೇಲೇನ್ಮಾಡ್ತಿದ್ರಿ" ಎಂದಳು. ಪುಟ್ಟುವು ಗಾಬರಿಯಿಂದ ತಬ್ಬಿಬ್ಬಾಗಿ "ನೋಡಜ್ಜೀ, ಬುಟ್ಟೀ ಕೆಳಗಿದ್ದ ಅವಲಕ್ಕಿ ಮೊಸರನ್ನೆಲ್ಲಾ ಪಿಲ್ಲಿತಿಂದುಹಾಕಿಬಿಟ್ಟಿತು. ನಾನು ಹಿಡಿದುಕೊಳ್ಳೋಣಾಂತ ಹೋದೆ. ನನ್ನೇ ಪರಚಿಹಾಕಿತು" ಎಂದನು. ಪಾಪ! ಬಾಯಿಯನ್ನೊರಿಸಿಕೊಳ್ಳುವುದನ್ನು ಮರೆತಿದ್ದ. ಗೌರಮ್ಮನು ನಿಜಾಂಶವನ್ನು ಕ್ಷಣಮಾತ್ರದಲ್ಲಿ ಗ್ರಹಿಸಿದಳು. "ಎಲೇ ಸುಬ್ಬೀ ಇಲ್ಲಿ ಬಾರೇ ಬೇಗ. ಈ ಪುಂಡ ಮಾಡಿರೋ ಕೆಲಸ ನೋಡ ಬಾರೇ" ಎಂದರಚಿದಳು. ಪುಟ್ಟು ಓಡಲಿಕ್ಕೆ ಸಾಹಸ ಮಾಡಿದ. ಆದರೆ ಗಟ್ಟಿಗಿತ್ತಿ ಗೌರಮ್ಮನ ಹಿಡಿಯಿಂದ ಬಿಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಈ ಕೆಟ್ಟ ಕೂಗಿಗೆ ಬೆದರಿ ಸುಬ್ಬಿಯು ಓಡಿಬಂದಳು. ಅವಳ ಹಿಂದೆ ಸಾವಿತ್ರಿಯೂ ಬಂದಳು. ಗೌರಮ್ಮನು ಸಂಕ್ಷೇಪವಾಗಿ ಎಲ್ಲವನ್ನೂ ವಿವರಿಸಿ ಮಗಳ ನ್ಯಾಯ ತೀರ್ಮಾನವನ್ನು ಕೇಳಿದಳು. ಮಗಳು ಮಾತನಾಡದೆ ಕಡೆಯುವ ಕೈಮಂ

ತನ್ನು ತಂದುಕೊಟ್ಟಳು. ಪುಟ್ಟುವಿಗೆ ಚೆನ್ನಾಗಿ ಪ್ರಹಾರವಾಯಿತು. ಕೈ ಗೆಣ್ಣುಗಳೆಲ್ಲಾ ಮುರಿದುಹೋದುವು. ಬೆನ್ನುಮೂಳೆಗಳು ನಿರನಿಟಲೆಂದವು. ಇವನನ್ನು ಬಿಡಿಸಲಿಕ್ಕೆ ಬಂದ ಸಾವಿತ್ರಿಗೂ ಒಂದೆರಡೇಟುಗಳು ಬಿದ್ದುವು. ಈ ವೇಳೆಗೆ ರಾಯರ ಧ್ವನಿ ಬಾಗಿಲಲ್ಲಿ ಕೇಳಿಬರಲು ಸುಬ್ಬಿಯು ಅತ್ತ ಓಡಿ ದಳು. ಗೌರಮ್ಮನು "ನೀವೇನಾದರೂ ರಾಯರಿಗೆ ಈ ವಿಚಾರ ತಿಳಿಸ ಬೇಕು, ನಿಮ್ಮಿಬ್ಬರನ್ನೂ ಕೊಂದುಹಾಕಿಬಿಡ್ತೀನಿ" ಎಂದು ನೊಂದ ಮಕ್ಕ ಳಿಗೆ ಸಂದೇಶವಿತ್ತು ಅವರ ಕೋಣೆಗಟ್ಟಿದಳು.

ಸಂದೇಶವು ಪುಟ್ಟುವಿನ ದುಃಖವನ್ನಿಮ್ಮಡಿಸಿತು ಸಾವಿತ್ರಿಯ ಸಂತಾ ಪಕ್ಕೆ ಎಲ್ಲೆಯಿಲ್ಲದೆ ಹೋಯಿತು. ಪುಟ್ಟುವನ್ನು ಅಜ್ಜಿ ನಿಷ್ಕಾರಣವಾಗಿ ಯಾಕಿಂತು ಹೊಡೆದಳು? ಅಮ್ಮನಿದ್ದಾಗ ಅವನೆಷ್ಟು ಬಾರಿ ಹೀಗೆ ಕದ್ದು ತಿಂದರೂ, ಅವಳೊಂದು ಕಠಿಣೋಕ್ತಿಯನ್ನೂ ಆಡುತ್ತಿರಲಿಲ್ಲವೇಕೆ? ಎಂದು ಚಿಂತಿಸುತ್ತ ರಾತ್ರಿಯನ್ನೆಲ್ಲಾ ನಿದ್ದೆಯಿಲ್ಲದೆಯೇ ಕಳೆದಳು. ಪುಟ್ಟುವಿಗಾಗಿ ಅತ್ತು ಅತ್ತು ಅವಳ ಕಣ್ಣುಗಳೆರಡೂ ಊದಿಕೊಂಡಿದ್ದುವು.

ಬೆಳಗಾಯಿತು. ಸಾವಿತ್ರಿಯ ಮುಖದಲ್ಲಿ ಕಳೆಯಿರಲಿಲ್ಲ. ತೇಜಸ್ಸಿರ ಲಿಲ್ಲ. ಯಾವುದಕ್ಕೂ ಉತ್ಸಾಹವಿಲ್ಲ. ಮೈಕೈಯನ್ನು ಮುರಿಯುವಳೇವಿನಾ ಎಂದಿನಂತೆ ಸ್ನಾನಮಾಡಿ ತುಳಸಿಯ ಪೂಜೆಯಲ್ಲಿ ತೊಡಗಳು. ಬಲಗಣ್ಣು ಬೇರೆ ಹಾರತೊಡಗಿತು. ತನ್ನ ಭಾಗಕ್ಕೆ ಮತ್ತಾವ ಅರಿಷ್ಟಕಾದಿದೆಯೋ ಎಂದು ಮತ್ತೂ ಖಿನ್ನಳಾದಳು. ಆದರೂ ಸ್ವಲ್ಪ ಚೇತರಿಸಿಕೊಂಡು ಎಂದಿ ನಂತೆ ಕೆಲಸಕಾರ್ಯಗಳಿಗೆ ತೊಡಗಿದಳು. ಗೌರಮ್ಮನಿಗೆ ತನ್ನ ನಡತೆಯು ಸ್ವಲ್ಪವಾದರೂ ಪರಿತಾಪವನ್ನು ಉಂಟುಮಾಡಲಿಲ್ಲ. ಸಾವಿತ್ರಿಯ ಅಸ್ವಸ್ಥ ತೆಯು ಅವಳಿಗಿನ್ನೂ ಆಗ್ರಹವನ್ನೇ ಉಂಟುಮಾಡಿತು. "ಏನೇ ಚಿನ್ನಾಲೀ, ಇದೇನು, ನಿಮ್ಮಜ್ಜನಮನೇಂತ ತಿಳ್ಕೊಂಡ್ಬಿಟ್ಟೆಯೊ. ಗೌರಮ್ಮನಹಾಗೆ ಸಿಂಗಾರ ಮಾಡಿಕೊಂಡು ನೀನು ಕುಳಿತುಕೋ. ಪರಿಚಾರಕರಂತೆ ನಾನೂ ಸುಬ್ಬೀನೂ ನಿನ್ನ ಚಾಕರಿ ಮಾಡ್ತೀವಿ; ಎದ್ದು ಒಟಪಟನೆ ನಾಲ್ಕು ಕೆಲಸ ಮಾಡೇಳು. ಊಟದ್ಮನೇಲಿ ಕಾಫಿ ಪಾತ್ರೆ ಬಿದ್ದಿದೆ. ಚೆನ್ನಾಗಿ ಹುಳಿ ಹಾಕಿ ಕೊಂಡು ಬಾ. ಪಾತ್ರೆಒಳಗೇನಾದರೂ ಹುಣಿಸೇಹಣ್ಣಿಗಸ್ಟಿಯೋ ನಿನ್ನ ಭೂಗತಾ ಮಾಡ್ಹಾಕ್ಬಿಡ್ತೀನಿ" ಎಂದು ಗದರಿಸಿಕೊಳ್ಳಲು ವ್ಯಾಘ್ರನ ಗರ್ಜ

ನೆಯನ್ನು ಕೇಳಿದ ಹುಲ್ಲೆಯು ಭೀತಿಯಿಂದ ಏಳುವುದನ್ನೂ ಬೀಳುವುದನ್ನೂ ನೋಡದೋಡುವಂತೆದ್ದು ಅಜ್ಜಿಯು ಅಜ್ಞಾಧೀನಳಾದಳು. ಅಂದು ಆ ಎರಡು ಪಾತ್ರೆಗಳನ್ನು ತೊಳೆಯುವಾಗ ಅನುಭವಿಸಿದ ಸಂಕಟವನ್ನು ತಾಯಿಯು ಗತಿಸಿದದಿನ ಮಾತ್ರ ಅನುಭವಿಸಿದ್ದಳಂತೆ!! ಇಂದು ಅದೇಬಗೆಯ ಸಂಕಟ. ಹೊಟ್ಟೆಯಲ್ಲಿ ಕಾಲಾಗ್ನಿಯು ಉರಿಯುತ್ತಿದ್ದಂತೆ ಮೈಯಲ್ಲಾ ಕಂಪಾಯಮಾನದಿಂದ ಕಾದು ಕಬ್ಬಿಣದಂತಾಗಿತ್ತು. ದೇಹದಲ್ಲಿ ಜಾಗೃತಿಯಿದ್ದಂತೆ ಕಾಣಲಿಲ್ಲ. ಹೆಚ್ಚುತ್ತಿದ್ದ ಅಂತಸ್ತಾಪವನ್ನು ಸಹಿಸಲಾರದೆ ಹೋಗಿ ಹಾಸಿಗೆಯ ಮೇಲೆ ಮಲಗಿದಳು.

೫

೯ ಘಂಟೆಯ ವೇಳೆಗೆ ತಂತಿಯ ವರ್ತಮಾನದಾಳು ಮನೆಯ ಬಾಗಿಲಿಗೆ ಬಂದು "ಲಕ್ಷ್ಮಣರಾಯ್ರೇ" ಎಂದು ಕೂಗಿದನು. ರಾಯರ ಎದೆ ಝಲ್ಲೆಂದಿತು, "ಇದೇನು ಎಂದೂ ಇಲ್ಲದ ತಂತೀ ವರ್ತಮಾನ ಇವತ್ತು ನನಗೆ" ಎಂದು ಗಡಗಡನೆ ನಡುಗುತ್ತ ಲಕ್ಕೋಟೆಯನ್ನು ಆಳಿನಿಂದ ತೆಗೆದುಕೊಂಡು ಒಡೆದು ನೋಡಿ "ಅಯ್ಯೋ, ಎಂದು ಚೀರಿ ಮೂರ್ಛಿತರಾದರು. ರಾಯರಿದ್ದೆಡೆಗೆ ಎಲ್ಲರೂ ಓಡಿಬಂದರು. ಸಾವಿತ್ರಿಯೂ ಭಯಚಕಿತಳಾಗಿ ಓಡಿಬಂದಳು. ರಾಯರು ಸ್ವಲ್ಪ ಕಾಲಾನಂತರ ಎಚ್ಚತ್ತು ವಚನಶೂನ್ಯರಾಗಿ ಸಾವಿತ್ರಿಯನ್ನು ಹತ್ತಿರ ಕರೆದು ಅಜಾನುವಾದ ತಮ್ಮೆರಡು ಬಾಹುಗಳಿಂದಲೂ ಅಪ್ಪಿ ಮಕ್ಕಳಂತೆ ಅಳಲಾರಂಭಿಸಿದರು. ರಾಯರ ಆರ್ತಾಲಾಪವು ಎಲ್ಲರ ಕಣ್ಣುಗಳಲ್ಲಿಯೂ ನೀರನ್ನು ತಂದಿತು. ಆದರೆ ಕಾರಣವನ್ನು ಕೇಳುವ ಧೈರ್ಯವಾರಿಗೂ ಇಲ್ಲ. ಸ್ವಲ್ಪಕಾಲಾನಂತರ ಸಾವಿತ್ರಿಯೇ ತಂದೆಯನ್ನು "ಯಾಕಣ್ಣಾ ಹೀಗಳುತ್ತೀ" ಎನಲು ರಾಯರ ದುಃಖವು ಮತ್ತೂ ಹೆಚ್ಚಿತು. ಮಗಳನ್ನು ಬಿಗಿದಪ್ಪಿ "ಅಯ್ಯೋ ನನ್ನ ಕಂದಾ, ಇನ್ನೂ ಹುಟ್ಟಲಿಲ್ಲ—ಬೆಳೆಯಲಿಲ್ಲ—ಬಾಳಲಿಲ್ಲ—ನಿನಗೀಗಲೇ ವೈಧವ್ಯ ಪ್ರಾಪ್ತವಾಯಿತಲ್ಲಮ್ಮಾ" ಎನಲು ಸಾವಿತ್ರಿಗೆ ಸಿಡಿಲು ಬಡಿದಂತಾಯಿತು ಉಕ್ಕಿಬಂದ ದುಃಖವು ಸ್ಮರಣೆ ತಪ್ಪಿಸಿತು. ಎಲ್ಲರೂ ಬಡಬಾಲೆಯ ದಾರುಣ ಶೋಕಕ್ಕೆ ಮರುಗಿ ಆದರದಿಂದ ಕರದೊಯ್ದು ಹಾಸಿಗೆಯ ಮೇಲೆ ಮಲಗಿಸಿದರು. ಈ ಆಕಸ್ಮಿಕ ವೃತ್ತಾಂತದ ಸಿಡಿಲುಹೊಡೆತ,

ರಾತ್ರಿಯ ವ್ಯಸನ ಇವುಗಳು ಕೂಡಿ ಸಾವಿತ್ರಿಯನ್ನು ಕ್ರೂರವಾದ ಜ್ವರದ ಮಡುಲಲ್ಲಿ ಹಾಕಿದವು. ಜ್ವರವು ಕ್ಷಣಕ್ಷಣಕ್ಕೂ ಏರುತ್ತಿತ್ತು.

ಸಾವಿತ್ರಿಯು ಗಂಡನೆಂದರೇನೆಂಬುದನ್ನು ಅರಿಯದವಳು. ಗಂಡನೊಂದಿಗೆ ಬಾಳಿ ಬಾಳ್ವೆಯ ಸುಖದುಃಖಗಳನ್ನರಿತಿರಲಿಲ್ಲ. ಮದುವೆಯ ಮರ್ಮವು ಅವಳ ಕಣ್ಣಿಗಿನ್ನೂ ಬಿದ್ದಿರಲಿಲ್ಲ. ಮದುವೆಯಾದಮೇಲೆ ಒಂದೆರಡುಸಾರಿ ಗಂಡನೊಂದಿಗೆ ಕೆಲವು ಮಾತುಗಳನ್ನಾಡಿದುದನ್ನು ಬಿಟ್ಟರೆ ಗಂಡ ನಾರೋ-ತಾನಾರೋ ! ಹೀಗಿದ್ದರೂ ಅಂದಿನ ಮಾತು ಅವಳ ಹೃದಯಕ್ಕೆ ಶಲ್ಯವನ್ನು ನೆಟ್ಟಂತಾಯಿತು, ತನ್ನ ಮುಂದಿನ ಜೀವಿತವು ಸುಗಮವಾದುದಲ್ಲವೆಂದು ಅವಳಿಗೆ ಭಾಸವಾಯಿತು. ಹೆಣ್ಣಾಗಿ ಹುಟ್ಟಿದವಳಿಗೆ ಪರಮ ಪವಿತ್ರವಾದ "ಪತಿ" ಯೆಂಬ ಪದಾರ್ಥದ ಅಗಲುವಿಕೆಗೆ ಸಾಟಿಯನ್ನು ಯಾವ ಕವಿಸಂತನೂ ಈವರೆಗೆ ಕೊಟ್ಟಿಲ್ಲ. ಆದರೆ ಈ ಮನೋವೈಕಲ್ಯವು ಕ್ಷಣಿಕವಾದುದೇ ? ಸರ್ವ ದುಃಖವನ್ನೂ ಶಮನಮಾಡುವ ಅತುಲ ಪರಾಕ್ರಮಿ ಕಾಲನು (ಕಾಲವು) ಈ ವ್ಯಥೆಯನ್ನು ಕೊನೆಗಾಣಿಸಬಲ್ಲನೇ ? ಅಸಾಧ್ಯ.

ಸಾವಿತ್ರಿಯ ಪರಿಸ್ಥಿತಿಯು ಬಹು ಕಟುತರವಾಗಿದ್ದಿತು. ತಂದೆಯ ಜಾಗರೂಕತೆಯಿಂದಲೂ, ಉತ್ತಮ ವೈದ್ಯರ ಸಹಾಯದಿಂದಲೂ ದೇಹದ ಜಾಡ್ಯವು ಅಳಿಯಿತು, ಆದರೇನು? ಮನಕ್ಕೆ ಶಾಂತಿಮಾತ್ರ ದೊರೆಯಲಿಲ್ಲ. ಸುಖವಿಲ್ಲದೆ ಶಾಂತಿಯೆಂತು ದೊರೆಯಬೇಕು ?

ದುಃಖದ ಕಠಿನತನವು ಮನೆಮಂದಿಗೆಲ್ಲಾ ಎಷ್ಟು ದಿನವಿರುತ್ತದೆ. ಅದರಲ್ಲಿಯೂ ಸ್ವಾರ್ಥಗುಣದ ಅಸ್ತಿತ್ವವನ್ನು ಹೊಂದಿರತಕ್ಕ ಈ ಪ್ರಪಂಚದಲ್ಲಿ! ಅದರಲ್ಲಿಯೂ ಸುಬ್ಬಿ ಗೌರಮ್ಮ ಇವರ ಆಡಳಿತ ವಿಚಕ್ಷಣೆಗೆ ಒಳಪಟ್ಟದ್ದ ಮನೆಯಲ್ಲಿ! ಬೇರೆ ವಿಧದಲ್ಲಿ ಈ ಮರಣವು ತಾಯಿ ಮಗಳಿಬ್ಬರಿಗೂ ಆಗ್ರಹವನ್ನುಂಟುಮಾಡಿತೆಂದು ಹೇಳಬಹುದು. "ಈ ಶನಿ ನಮ್ಮ ಮನೆಬಿಟ್ಟು ತೊಲಗಿಹೋಗುತ್ತಿತ್ತೆಂದಿದ್ದರೆ ಜನ್ಮಕ್ಕೆ ಗಂಟು ಬಿತ್ತು" ಎಂದು ಉದ್ಗಾರಕ್ಕಾರಂಭವಾಯಿತು. ಮೊದಮೊದಲು ಈ ಉದ್ಗಾರವು ಸಾವಿತ್ರಿಗೆ ಕೇಳಬೇಕು, ಆದರವಳೆದುರಿಗೆ ಆಡಿದಹಾಗಿರಕೂಡದು ಹಾಗೆ ಹೊರಬರುತ್ತಿತ್ತು. ಉತ್ತರೋತ್ತರ ಅವಳೆದುರಿಗೇ ಆರಂಭ

ವಾಯಿತು. ಮನದಲ್ಲಿ ಅಶಾಂತತೆ, ಅನಾರೋಗ್ಯ, ತಾಯಿಯ ಮತ್ತು ಹೃದಯೇಶ್ವರನ ಅಗಲುವಿಕೆಯ ಯಾತನೆ, ಇವುಗಳ ಜೊತೆಗೆ ಹೃದಯ ಭೇದಕ ಕ್ರೂರನುಡಿಗಳು !!.

ಸಾವಿತ್ರಿಯ ಪ್ರತಿಯೊಂದು ನಡವಳಿಕೆಯೂ ಗೌರತ್ತೆಗೆ ದಿನದಿನಕ್ಕೆ ಸಹಿಸದಂತಾಗುತ್ತ ಬಂದಿತು. ತಾನು ಸ್ನಾನಮಾಡಿ ಅಡಿಗೆಗೆ ತೊಡಗಿದ್ದಾಗ ಸಾವಿತ್ರಿಯು ಮುಳಿದರೆ ಮೈಲಿಗೆಯಾಯಿತೆಂದು ಮನೆಯಲ್ಲೆಲ್ಲಾ ಹಾರಾಡಿ ರಾದ್ಧಾಂತಕ ಮಾಡಿ ಅವಳ ಷಷ್ಠ್ಯಪೂರ್ತಿ ಶಾಂತೋತ್ಸವವನ್ನಂದು ನೆರವೇರಿಸುತ್ತಿದ್ದಳು. ಸಾವಿತ್ರಿಯ ದರ್ಶವೆಂದರೆ ಅಮಂಗಳ.

ಸರ್ಕಾರದ ಕೆಲಸದಮೇಲೊಂದುಸಲ, ಲಕ್ಷ್ಮಣರಾಯರು ನಗರಕ್ಕೆ ಪ್ರಯಾಣ ಬೆಳಸಿದರು. ಮಾರನೆಯ ದಿನ ಬೆಳಿಗ್ಗೆ ಆಕಸ್ಮಾತ್ತಾಗಿ ಸುಬ್ಬಿಯು ದೇವರಪಠ ನೋಡುವುದರ ಬದಲು ಸಾವಿತ್ರಿಯ ಮುಖವನ್ನು ಕಂಡಳು. ಕಂಡ ಕ್ಷಣದಿಂದಲೇ ಅವಳ ಹೃದಯವು ಡವಡವನೆ ಬಡಿದುಕೊಳ್ಳಲಾರಂಭಿಸಿತು. ತಾಯಿಯು ಈ ಸುದ್ದಿಯನ್ನು ಕೇಳಿ ಭಯಚಕಿತಳಾಗಿ "ಈಶ್ವರಾ, ಇವತ್ತು ನನ್ನಮಗೂಗೆ ಯಾವ ವಿಪತ್ತೂ ಬರದಿದ್ದರೆ ನಾಳೆ ಅಮಾವಾಸ್ಯೆಯ ದಿನ ನಿನಗೆ ಒಂದು ಸೇರು ಎಳ್ಳು, ಎರಡು ಸೇರು ಎಣ್ಣೆ ಕೊಡ್ತೀನಪ್ಪಾ" ಎಂದು ಹರಸಿಕೊಂಡಳು. ಮಧ್ಯಾನ್ಹದವರೆವಿಗೆ ಏನೂ ಸಂಭವಿಸಲಿಲ್ಲ, ಸಾಯಂಕಾಲ ತಾಯಿ ಮಗಳಿಬ್ಬರೂ ಉಪಕರಣಗಳನ್ನು ಕೆರೆಗೆ ತೆಗೆದುಕೊಂಡು ಹೋಗಿ ತೊಳೆದುಕೊಂಡು ಮನೆಗೆ ನೀರು ತರುತ್ತಲಿದ್ದಾಗ ಆಕಸ್ಮಾತ್ತಾಗಿ ಸುಬ್ಬಿಯ ನೆರಿಯು ಕಾಲಿಗೆ ಸಿಕ್ಕಿಕೊಳ್ಳಲು ಅವಳು ಬಿದ್ದಳು. ಹಣೆಗೆ ಸ್ವಲ್ಪ ಏಟುತಗಲಿ ರಕ್ತಬಂದಿತು. ಇಷ್ಟಕ್ಕೇ ಸುಬ್ಬಿಯು ಗೊಳೋ ಎಂದು ಅಳಲು ಮೊದಲಿಟ್ಟಳು ಈ ಗೋಳನ್ನು "ಅಪಿಗ್ರಾವಾವರೋದತಿ" ಎಂದಂದ ಕವಿ ಭವಭೂತಿ ಯಸಾಡರೂ ಕಂಡಿದ್ದರೆ "ಅಪಿಗ್ರಾವಾವಭೇದತಿ" ಎಂದು ತನ್ನೋಕ್ತಿಯನ್ನು ಬದಲಾಯಿಸದಿರುತ್ತಿರಲಿಲ್ಲ!!! ಗೌರಮ್ಮನ ಹೃದಯಕ್ಕೆ ಶೂಲ ನೆಟ್ಟಂತಾಯಿತು! ಬಿದ್ದವಳು ಪ್ರೇಮಪುತ್ರಿಯಾದ ಸುಬ್ಬೀ! ಕಾರಣವೋ, ಬೆಳಿಗ್ಗೆ ಸಾವಿತ್ರಿಯ ಅನಿಷ್ಟಮುಖವನ್ನು ನೋಡಿದುದಕ್ಕಾಗಿ!! ಅವಳ ಕಣ್ಣುಗಳಿಂದ ಧಾರೆಧಾರೆಯಾಗಿ ದುಃಖಾಶ್ರುವು ಹರಿಯಲಾರಂಭಿಸಿತು!

ಬಗೆಬಗೆಯಲ್ಲಿ ಮಗಳಿಗೆ ಸಮಾಧಾನವನ್ನು ಹೇಳಲಾರಂಭಿಸಿದರು! ಈ ವೈಚಿತ್ರ್ಯವೇನೆಂದರಿಯಲು ಸುತ್ತಲೂ ಒಂದು ಗುಂಪೇ ಸೇರಿತು. ಇದು "ಅಳುವವರ ಮೇಲೆ ಗೋಡೆ ಬಿದ್ದಂತಾಯಿತು" ಎಂಬ ಗಾದೆಯ ತಜ್ಞತೆಯನ್ನು ತೋರಿತು. ಗೌರಮ್ಮನನ್ನು ಶೋಕವು ದಹಿಸುತ್ತಿತ್ತು. ಆಕೆಯಲ್ಲಿ ಆಗ್ರಹವು ಕುದಿಯುತ್ತಿತ್ತು, ಪ್ರತಿ ಹಿಂಸೆಯ ದಾಹವು ವೃದ್ಧಿಯಾಗುತ್ತಲಿತ್ತು, ಎಂದರೂ ಪ್ರಾಯಶಃ ಕವಿತಾಲಂಕಾರದ ಅತಿಶಯೋಕ್ತಿಯಾಗಲಾರದು. ಅಂತೂ ಅಳುತಳುತ್ತ ತಾಯಿಮಗಳಿಬ್ಬರೂ ಮನೆಗೆ ಬಂದು ಸೇರಿದರು.

ಇವರಿಬ್ಬರ ದೀರ್ಘರೋದನಕ್ಕೆ ಬೆದರಿ, ಪುಟ್ಟುವಿಗೆ ಗಾಳಿಪಟ ಕಟ್ಟಿಕೊಡುತ್ತಲಿದ್ದ ಸಾವಿತ್ರಿಯು ಹೊರಬರಲು ಗೌರಮ್ಮನ ಕೋಪವು ಮೂರ್ತಿತ್ವವನ್ನು ತಾಳಿತು. "ಅಯ್ಯೋ, ಪೀಡೆ! ನಮ್ಮನೇ ಬ್ರಹ್ಮರಾಕ್ಷಸೀ, ನನ್ನ ಮಗಳನ್ನು ಇವತ್ತು ಬಲಿತೊಗೊಂಡ್ಯಾ" ಎಂದು ಆರ್ಭಟಿಸಿ, ಮಗಳನ್ನೊಳಗೆ ಕರೆದೊಯ್ದು ಮಲಗಿಸಿ ಸಾವಿತ್ರಿಯ ಕಡೆ ತಿರುಗಿದಳು. ಅಜ್ಜಿಯ ಆರ್ಭಟವು ಸಾವಿತ್ರಿ, ಪುಟ್ಟು ಇವರನ್ನು ದೊಡ್ಡ ಸಮಸ್ಯೆಯಲ್ಲಿ ಹಾಕಿತು. ಸಾವಿತ್ರಿಯು ಸ್ವಲ್ಪ ಧೈರ್ಯತಾಳಿ "ಅವ್ವಾ, ಇದ್ಯಾಕೆ ಹೀಗ್ಬಯ್ತೀಯಾ, ನಾನೇನ್ಮಾಡಿದ್ದು ಚಿಕ್ಕಮ್ಮ ಯಾಕೆ ಹೀಗಳ್ತಾ ಇದ್ದಾಳೆ" ಎಂದು ಕೇಳಲು ಅಜ್ಜಿಯಲ್ಲಡಕವಾಗಿದ್ದ ಶೌರ್ಯವೆಲ್ಲಾ ಒಮ್ಮೇಲೇ ಉಕ್ಕಿಬಂದಿತು. "ಮೂದೇವಿ! ನಿನ್ನಮುಕ ಬೆಳಿಗ್ಗೆ ನೋಡಿ ನನ್ಕಂದ ತಲೇಬಡಿದು ಕೊಂಡಿತು. ನೀನು ಬ್ರಹ್ಮರಾಕ್ಷಸಿ" ಎಂದು ಸಿಂಹನಾದ ಮಾಡುತ್ತಾ ಸಾವಿತ್ರಿಯ ಹೆರಳನ್ನು ಹಿಡಿದು ಹೊಡೆಯಲಾರಂಭಿಸಿದಳು! ಬಡಿಯಲಾರಂಭಿಸಿದಳು! ಮರುಕವಿಲ್ಲದೆ ಬಡಿದಳು. ಅಜ್ಜಿಯ ಹಿಡಿತದಿಂದ ಬಿಡಿಸಿಕೊಳ್ಳಲು ಸಾವಿತ್ರಿಗೆ ಶಕ್ತಿಯಿಲ್ಲ. ಪಾಲಿಗೆ ಬರುವುದನ್ನೆಲ್ಲಾ ಅನುಭವಿಸುವುದೇ ತನ್ನ ಕರ್ತವ್ಯವೆಂದರಿತು ಮರುಮಾತಾಡದೆ ಸುಮ್ಮನಿದ್ದಳು. ಪುಟ್ಟುವು ಈ ನೋಟವನ್ನು ನೋಡಲಾರದೆ ದೊಡ್ಡ ರಾಗತೆಗೆದು ಅಳಲಾರಂಭಿಸಿದನು. ಮಧ್ಯೆ ಬಿಡಿಸಿಕೊಳ್ಳಲು ಒಂದೆರಡುಬಾರಿ ಬರಲು, ಅವನಿಗೂ ಕೆಲವು ಏಟುಗಳು ಬಿದ್ದವು. ಪೆಟ್ಟುಗಳು ಎಡೆತಡೆಯಿಲ್ಲದೆ ಬೀಳುತ್ತಿದ್ದವು. ಕೊನೆಗೆ ಸಾವಿತ್ರಿಯ ತಲೆಯಿಂದ ರಕ್ತಪ್ರವಾಹವು ಹೊರಟಿತು.

ಇದನ್ನು ಕಂಡು ಪುಟ್ಟುವು ಚಿಟ್ಟನೆ ಚೀರಿದನು! ಅಕ್ಕನು ಸತ್ತುಹೋದ ಳೆಂದು ಭಾವಿಸಿದನು! ತನ್ನ ಪ್ರೇಮ ಸರ್ವಸ್ವವಾದ ಅಕ್ಕನು ಅಮ್ಮಹೋ ದೆಡೆಗೆ ಹೊರಟುಹೋಗುವಳೆಂದು ಹೆದರಿದನು! ಇದ್ದುದರಲ್ಲಿ ಧೈರ್ಯ ತೆಗೆದುಕೊಂಡು ಬೀದಿಯಬಾಗಲಿಗೆ ಹೋಗಿ "ಅಯ್ಯೋ, ಬನ್ನಿ! ಅವ್ವ ಅಕ್ಕನನ್ನು ಕೊಂದುಹಾಕಿಬಿಟ್ಟಳು!" ಎಂದು ಕೂಗಲು ಎದುರುಮನೆಯ ಪುಟ್ಟಾಜೋಯಿಸರೂ, ಆಗತಾನೆ ಕಛೇರಿಯಿಂದ ಮನೆಗೆ ಹೋಗುತ್ತಲಿದ್ದ ಸಬ್-ರಿಜಿಸ್ಟ್ರಾರ್ ವೆಂಕೋಬರಾಯರೂ, ಸುತ್ತಮುತ್ತಲಿನವರೆಲ್ಲರೂ ಭಯಾನ್ವಿತರಾಗಿ ಓಡಿಬಂದರು. ಇವರನ್ನು ಕಂಡು ಗೌರಮ್ಮನು ತನ್ನ ಯಾಗಪಶುವನ್ನು ಬಿಟ್ಟು ಅಡಿಗೆಯ ಕೋಣೆಗೋಡಿದಳು. ಸಾವಿತ್ರಿಗೆ ಮೈಮೇಲೆ ಸ್ಮರಣೆ ತಪ್ಪಿಹೋಗಿತ್ತು. ಅವಳನ್ನು ತೊಡೆಯಮೇಲೆ ಮಲ ಗಿಸಿಕೊಂಡು ವೆಂಕೋಬರಾಯರು ತಮ್ಮ ಕರವಸ್ತ್ರವನ್ನು ನೀರಿಗದ್ದಿ ರಕ್ತ ವನ್ನು ಒರಿಸಲಾರಂಭಿಸಿದರು. ರಾಯರ ಎದೆಯು ಡವಡವನೆ ಬಡಿದುಕೊ ಳ್ಳುತ್ತಿತ್ತು. ಪಕ್ಕದಲ್ಲಿದ್ದ ಜೋಯಿಸರನ್ನು ಕಂಡು "ಶಾಸ್ತ್ರಿಗಳೇ, ಓಡಿ ಹೋಗಿ ಡಾಕ್ಟರನ್ನು ಕರೆದುಕೊಂಡು ಬನ್ನಿ, ಇಲ್ಲಿ ನಾನು ನೋಡಿಕೊ ಳ್ಳುತ್ತೇನೆ" ಎಂದು ಡಾಕ್ಟರವರಿಗೆ ಹೇಳಿ ಕಳುಹಿಸಿ ತಾವು ಸಾವಿತ್ರಿಯ ಪೆಟ್ಟುಗಳಿಗೆ ಪ್ರಥಮ ಚಿಕಿತ್ಸೆಯನ್ನು ಮಾಡಲಾರಂಭಿಸಿದರು. ಪುಟ್ಟೂ ಮತ್ತು ಇತರ ಪ್ರೇಕ್ಷಕರು ಎವೆಯಿಕ್ಕದೆ ನೋಡುತ್ತ ನಿಂತರು. ಸೇವೆಮಾ ಡುತ್ತ ಮಾಡುತ್ತ ರಾಯರಕಣ್ಣುಗಳಿಂದ ಮುತ್ತಿನ ಹನಿಗಳೊಂದೆರಡುದುರಿ ದವು. ಇದು ಪುಟ್ಟುವನ್ನು ನಿಶ್ಶಕ್ತನನ್ನಾಗಿ ಮಾಡಿತು. "ರಾಯ್ರೇ ಅಕ್ಕ ಬದುಕುವುದಿಲ್ಲವೇ? ಇಲ್ಲ, ಇಲ್ಲ, ನೀವೂ ಅಳುತ್ತಿರುವಿರಿ, ಅಕ್ಕನು ನನ್ನನ್ನು ಬಿಟ್ಟುಹೋದಳು" ಎಂದು ಬಿಕ್ಕಿಬಿಕ್ಕಿ ಅಳಲಾರಂಭಿಸಿದನು. ಗುಂಪಿನೊಳಗಿದ್ದ ಜೋಯಿಸರ ಮಗಳು ಕಮಲಮ್ಮನು, ಪುಟ್ಟುವನ್ನು ಅಪ್ಪಿ ಸಂತೈಸಲಾರಂಭಿಸಿದಳು.

ಈ ವೇಳೆಗೆ ಡಾಕ್ಟರೂ ಬಂದರು. ರೋಗಿಯನ್ನು ಪರೀಕ್ಷಿಸಿ ರಾಯ ರಿಗೆ ಮೆಲ್ಲಗೆ "ರಾಯರೇ, ಹೃದಯವು ಬಹಳ ಕೃಶವಾಗಿಹೋಗಿದೆ. ಬಾಲ ಕಿಗೆ ಕೊಂಚ ಉದ್ವೇಗವಾದರೂ ಕೂಡಲೇ ಮರಣ ಸಂಭವಿಸುವುದು. ಇಲ್ಲಿ ನಡೆದುದಲ್ಲವನ್ನೂ ಜೋಯಿಸರು ನನಗೆ ತಿಳಿಸಿದರು. ಇವಳನ್ನು ನಿಮ್ಮ

ಮನೆಗೆ ಕರೆದೊಯ್ದು ನಾನು ಹೇಳುವಂತೆ ಆದರಿಸಿದರೆ ಪ್ರಾಣ ಉಳಿದರೂ ಉಳಿಯಬಹುದು. ಇಲ್ಲಿಯೇ ಇದ್ದರೆ ಖಂಡಿತಾ ಪ್ರಾಣಕ್ಕೆ ಸಂಚಕಾರವೇ." ಎಂದುಸುರಲು ರಾಯರು ಸಾವಿತ್ರಿಯನ್ನು ಎತ್ತಿಕೊಂಡು, ಪುಟ್ಟುವನ್ನು ಸಂಗಡಲೇ ಕರೆದುಕೊಂಡು ಮನೆಗೆ ಹೊರಟರು.

೬

ಅವ್ಮಾ! ಸಾವಿತ್ರೀ! ಕಂದಾ! ಎಲ್ಲಿದ್ದೀಯಾ!

ಉತ್ತರವೇ ಇಲ್ಲ.

ಸಾವಿತ್ರೀ! ಸಾವಿತ್ರೀ! ಸಾತೂ! "........." ಪುನಃ ಉತ್ತರವೇ ಇಲ್ಲ!

ಏನೇ! ಎಲೇ! ಸಾತೂ ಬೆಳಗಾಗಿಯೆದ್ದು ಎಲ್ಲಿ ಹೋದಳೇ?

ನಂಗೇನುಗೊತ್ತು! ಎಲ್ಲಿ ಹೋಗ್ತಾಳೋ! ಎಲ್ಲಿಂದ ಬರ್ತಾಳೋ? ಅವಳಿಗ್ಹೇಳಿ ನಾಬದ್ಕೋದುಂಟೇ? ಆ ಮೂದೇವಿ ಪುಟ್ನೂನ ಕೇಳಿ! ಹೇಳ್ತಾನೆ.

ಪುಟ್ಟುವು ಪ್ರಶ್ನೆಗೆ ಎದುರು ನೋಡದೆಯೇ ಸಾವಿತ್ರಿಗಾಗಿ ಮನೆಯನ್ನೆಲ್ಲಾ ಹುಡುಕಿ ಅನಂತರ ಅವಳ ಕೋಣೆಯನ್ನು ಹುಡುಕಿದನು. ಸಾವಿತ್ರಿ ಇರಲಿಲ್ಲ. ಆದರೊಂದು ಕಾಗದ ಸಿಕ್ಕಿತು. ಅದನ್ನು ತಂದು ಲಕ್ಷ್ಮಣರಾಯರ ಕೈಗಿತ್ತನು. ಕಾಗದವನ್ನು ನೋಡಿದರು! ಮೇಲ್ವಿಳಾಸವಿರಲಿಲ್ಲ! ಒಡೆದು ನೋಡಿದರು-ಸಾವಿತ್ರಿಯ ಮುತ್ತಿನಕ್ಷರ! ರಾಯರ ಎದೆ ಗುಂಡಿಗೆಯೊಡೆಯಿತು! ತೆರದಾಲಿಗಳಿಂದ ಪತ್ರವನ್ನು ಓದಿದರು!

ಅಪ್ಪಾ,

ನಾನು ಯಾರಿಗೂ ಬೇಡವಾದ ವಸ್ತು. ಗಂಡನನ್ನು ಕಳೆದುಕೊಂಡ ನನ್ನ ಬಾಳು ನನಗೇ ಬೇಸರವಾಗಿತ್ತು. ಅಜ್ಜಿ, ಚಿಕ್ಕಮ್ಮ ಇವರ ಪ್ರೀತಿಯನ್ನು ಸಂಪಾದಿಸಲು ಯತ್ನಿಸಿದೆ. ಸಾಧ್ಯವಾಗಲಿಲ್ಲ. ಬಡಪ್ರಾಣಿಯ ಮೇಲೆ ಅವರಿಗೆ ಕರುಣಹುಟ್ಟಲಿಲ್ಲ ನನಗಿದ್ದವರು ನೀವೊಬ್ಬರು, ಪುಟ್ಟುವೊಬ್ಬ. ಈಗ ನಿಮ್ಮನ್ನು ಬಿಟ್ಟುಹೋಗುತ್ತೇನೆ. ನಾನೆಲ್ಲಿ ಎಂದು ಪುಟ್ಟು ಕೇಳಿದರೆ 'ಅಮ್ಮ' ನನ್ನು ಹುಡುಕುತ್ತ ಹೋದಳೆಂದು ತಿಳಿಸಿ. ನಾನು ಮಾಡುತ್ತಿರುವುದು ಒಳ್ಳೆಯದೋ, ಕೆಟ್ಟದ್ದೋ ಗೊತ್ತಿಲ್ಲ. ಎಲ್ಲವನ್ನೂ

ತಿಳಿದ ನೀವು ನಿಮ್ಮ ಮಗಳ ತಪ್ಪನ್ನು ಕ್ಷಮಿಸುತ್ತೀರೆಂದು ನಂಬಿದ್ದೇನೆ. ಜನ್ಮಜನ್ಮಕ್ಕೂ ನೀವೇ ನನ್ನ ತಂದೆಯಾಗಬೇಕು ' ಅಮ್ಮ ' ನೇ ಅಮ್ಮನಾಗಬೇಕು. ಪುಟ್ಟುವೇ ತಮ್ಮನಾಗಬೇಕು. ಇದೇ ಭಗವಂತನಲ್ಲಿ ನನ್ನ ಪ್ರಾರ್ಥನೆ.

ನಿರ್ಭಾಗ್ಯೆಯಾದ ನಿಮ್ಮ ಮಗಳು,

**ಸಾವಿತ್ರಿ.**

" ಅಕ್ಕಾ! ಅಕ್ಕಯ್ಯಾ! ಸಾತೂ . . . . ಎಲ್ಲಿದ್ದೀಯೇ? ಅಪ್ಪಾ ಕರೀತಾಯಿ ರೋದು ಕೇಳ್ಳೋದಿಲ್ಲೀನವ್ಮಾ ! " ಅಪ್ಪನ್ನ ಹಿಂಸೆ ಮಾಡಿದರೆ ಅಮ್ಮಾ ನೊಂದುಕೋತಾಳೆ " ಅಂತ ನೀನೇ ಹೇಳ್ತಿದ್ದೋಳೇ ಈಗೆಲ್ಲಿದ್ದೀಯಮ್ಮಾ !!

ಪುಟ್ಟೂ ! ಅಪ್ಪಾ ! ಇಲ್ಲಿ ಬಾಪ್ಪ ! ಅಯ್ಯೋ ನನ್ನ ಕಂದಾ !!

ಪುಟ್ಟುವು ತಂದೆಯ ಬಳಿಗೆ ಹೋಗಿ ನಿಂತನು.

" ಯಾಕಪ್ಪಾ. ಕಾಗ್ದ ನೋಡತ್ಲೂ ಹೀಗೆ ಕೂತುಬಿಟ್ಟೆ! ಯಾರದಪ್ಪಾ ಕಾಗ್ದ ! ಅಕ್ಕ ಎಲ್ಲಪ್ಪಾ ! ಅದ್ಯಾಕಪ್ಪಾ ನೀನೂ ಅಳ್ತಾ ಇದ್ದೀಯಾ ! ಮಾತಾಡಪ್ಪ ! ಅಕ್ಕನ್ನ ಬಯ್ಯ್ಬೇಡಪ್ಪ ! ಎಲ್ಲೋ ವೆಂಕೋಬರಾಯ್ರ ಮಗಳು ಕಾವೇರೀನ ನೋಡಿಕೊಂಡು ಬರೋಕೆ ಹೋಗಿರಬಹುದು."

ಲಕ್ಷ್ಮಣರಾಯರು ಪುಟ್ಟುವನ್ನು ಸಂತೈಸಲು ಪ್ರಯತ್ನಿಸಿದರು.

ಪುಟ್ಟುವನ್ನಪ್ಪಿ ಚುಂಬಿಸುತ್ತಾ " ಕಂದಾ, ನೀನಿಂದು ಅನಾಥ—ತಾಯನ್ನ ನೀನು ಇವತ್ತು ಕಳೆದುಕೊಂಡೆ—ಸಾವಿತ್ರೀ—ಕಂದಾ—ಎಲ್ಲಿ ಹೋದೆಯಮ್ಮ."

ಪುಟ್ಟುವಿಗೆ ಜ್ಞಾನೋದಯವಾದಂತಾಯಿತು. ದುಃಖದಿಂದ ಗಂಟಲು ಹಿಡಿದುಕೊಂಡು ಬಂದಿತು. ತಂದೆಯ ಬಳಿಗೆ ಬಂದು ಅವನೆರಡು ಕಪೋಲಗಳನ್ನೂ ಮೃದುವಾಗಿ ಹಿಡಿದು ತನ್ನ ಅಂಗಿಯ ಕೊನೆಯಿಂದ ಅವನ ದುಃಖಾಶ್ರುಗಳನ್ನೊರೆಸುತ್ತಾ " ಅಪ್ಪಾ! ಅಕ್ಕ ಎಲ್ಲಿಗೆ ಹೋದಳು. ನನ್ನೊಬ್ಬನನ್ನೇ ಬಿಟ್ಟೆಲ್ಲಿಗೆಹೋದಳು. ಒಂದು ಕ್ಷಣವೂ ನನ್ನನ್ನಗಲದಿದ್ದ ಅಕ್ಕ ಇವತ್ತು ನನ್ನ ಬಿಟ್ಟೆಲ್ಲಿಗೆ ಹೋದಳು. ಅವಳು ಪುನಃ ಬರಳೇ ! ಬಂದು " ತಮ್ಮ " ಎಂದು ನನ್ನನ್ನಪ್ಪಿ ಮುತ್ತುಕೊಡಳೇ ? ಅಪ್ಪಾ,

ಅಜ್ಜಿ-ಚಿಕ್ಕಮ್ಮ ನನ್ನ ಬಯ್ದಾಗ, ಹೊಡೆದಾಗ, ನನಗಾಗಿ, ಬಂದು ತಾನು ಏಟುತಿಂದು ನನ್ನನ್ನು ಅಳಬೇಡವೆಂದು ಲಾಲಿಸುತ್ತಿದ್ದ ಅಕ್ಕನಿವತ್ತು ನನ್ನ ಭಾಗಕ್ಕೆ ಇಲ್ಲವಾದಳೇ?''

ಕಂದನ ಮೈತಡವುತ್ತ—ಪುಟ್ಟುವಿನ ಧಾರಧಾರಾಶ್ರು ಪ್ರವಾಹವನ್ನು ಒರೆಸುತ್ತಾ "ಪುಟ್ಟು! ಸಮಾಧಾನ ತಂದುಕೋ! ಅಕ್ಕ 'ಅಮ್ಮ' ನ ಬಳಿಗೆ ಹೋದಳಪ್ಪಾ ! ಪುನಃ ಅವಳು ಬರುವುದಿಲ್ಲ.''

ಪುಟ್ಟುವಿನ ದುಃಖ ನೂರ್ಮಡಿಸಿತು. ಒಣಗಿ ಕಾಷ್ಠವಾಗಿ ನಿಂತಿದ್ದಮರಕ್ಕೆ ಬಿರುಗಾಳಿ ಹೊಡೆದಂತಾಯಿತು. ತಲ್ಲಣದಿಂದ ಪುಟ್ಟುವು ಒರಗಿ ಹಾಗೆಯೇ ಮೂರ್ಛಿತನಾದನು.

೭

ಶಾಂತಿತೇಜವನ್ನು ಬೀರುತ್ತಲಿದ್ದ ಒಂದು ಶುಭ್ರವಾದ ಕೋಣೆ. ಮಂದಾನಿಲನ ಮತ್ತು ಸೂರ್ಯನಾರಾಯಣನ ಪ್ರವೇಶವು ಸುಗಮವಾಗಿಯಾಗುತ್ತಲಿತ್ತು. ವಾತಾವರಣದ ವರ್ಚಸ್ಸು ಸ್ವಲ್ಪವಾದರೂ ಅಲ್ಲಿ ಬಿದ್ದಂತೆ ಕಾಣಬರುತ್ತಿರಲಿಲ್ಲ. ಒಂದು ಹಾಸಿಗೆಯ ಸುತ್ತಲೂ ಮೂರು ನಾಲ್ಕು ವ್ಯಕ್ತಿಗಳು. ಒಬ್ಬರ ಮುಖದಲ್ಲಿಯೂ ಜೀವಕಳೆ ಇರಲಿಲ್ಲ. ಡಾಕ್ಟರು ರೋಗಿಯನ್ನು ಪರೀಕ್ಷಿಸುತ್ತಾ ಮೃತ್ಯುವನ್ನೆದುರಿಸುವ ಯೋಧನಂತೆ ವೀರತ್ವವನ್ನು ತೋರುತ್ತಿದ್ದನು.

ಹೃದಯದೊಳಗಿನಿಂದ ಬೆಳೆದ ಶೋಕದ ದಾವಾಗ್ನಿಯೇ ಮೃತ್ಯರೂಪವನ್ನು ತಾಳಿತ್ತು. ರೋಗಿಯು ಹಾಸಿಗೆಯಿಂದೇಳುವ ಪ್ರಯತ್ನಮಾಡುತ್ತಾ "ಅಪ್ಪಾ! ನನಗಾಗಿ ನೀವೆಷ್ಟುಮಂದಿ ಕಷ್ಟಪಡುತ್ತಿರುವಿರಿ.''

"ಪುಟ್ಟೂ! ನಿನಗಾಗಿ ನಾವೇನೂ ಕಷ್ಟಪಡುತ್ತಿಲ್ಲ. ಹಿಂದೆ ನಾವು ಮಾಡಿದ ಪಾಪವನ್ನು ಈ ನಿನ್ನ ಸೇವೆಯಲ್ಲಿ ತೊಳೆಯುತ್ತಿದ್ದೇವೆ—ಮಲಗಿಕೋಪ್ಪಾ ಮಲಗಿಯೇ ಮಾತನಾಡು.''

"ಅಪ್ಪಾ'' ಅಕ್ಕ ಹೋಗಿರುವಜಾಗ ನಿನಗೆ ಗೊತ್ತೇ—"ಅಮ್ಮನ ಬಳಿಗೆ ಎಂದು ಹೇಳಿರುವಳಲ್ಲಾ ?

ಅಮ್ಮ ಎಲ್ಲಿಗೆ ಹೋಗಿರುವಳಪ್ಪಾ—ಅಮ್ಮನ ಮುಖವನ್ನೂ ಕೂಡ ನಾನು ಕಾಣೆ.''

"ಪುಟ್ಟು" ನನ್ನನ್ನು ನೋಡಲಿಲ್ಲಾ ಎಂದವಳು ಕೋಪಿಸಿಕೊಂಡಿರುವಳೇನೋ ?

"ಕಂದಾ, ನಿನ್ನ ಮೇಲೆ ಕೋಪವೆಂದರೇನು—ಯಾರುತಾನೇ ನಿನ್ನಮೇಲೆ ಕೋಪಮಾಡಲಾಗುತ್ತೆ."

"ಹಾಗಾದರೆ ಅಜ್ಜಿ ಕೋಪವಮಾಡುತ್ತಿದ್ದಳೇಕಪ್ಪಾ! ಅಜ್ಜಿ ಕೋಪ ಮಾಡಿಕೊಂಡು ನನ್ನನ್ನು ಹೊಡೆಯೋಕೆ ಬಂದಾಗ "ಅಕ್ಕ" ಬಂದು ತಾನು ಬೆನ್ನುಕೊಟ್ಟು ಏಟು ತಿನ್ನುತ್ತಿದ್ದಳು. ಅಂಥಾ ಅಕ್ಕನನ್ನು ಕಳೆದುಕೊಂಡೆ."

ಪುಟ್ಟುವಿನ ಪುಟ್ಟಪುಟ್ಟ ಮಾತುಗಳು ಎಲ್ಲರ ಕಣ್ಣುಗಳಿಂದಲೂ ಅಶ್ರುಗಳನ್ನು ತರಿಸುತ್ತಲಿತ್ತು "ಅಜ್ಜಿ-ಸುಬ್ಬಿ" ಇವರುಗಳ ಹೃದಯವೂ ಕರಗಿ ನೀರಾಗಿತ್ತು. ಅತ್ತು ಅತ್ತು ಕಣ್ಣುಗಳು ಕೆಂಡದಂತೆ ಕೆಂಪಾಗಿದ್ದವು.

ಸುತ್ತಲೂ ನಿಂತಿದ್ದವರ ನಡತೆಯು ಪುಟ್ಟುವಿಗೆ ಆಶ್ಚರ್ಯವನ್ನುಂಟುಮಾಡಿತು. ವಿಧವಿಧವಾಗಿ ಅಳುತ್ತಿದ್ದ ಅವರನ್ನುನೋಡಿಯುವನಿಗೆ ನಗೆಯುಂಟಾಯಿತು. **ದುಃಖದಲ್ಲಿಯೂ ನಗು!** ಮೃದುವಾಗಿ ನಕ್ಕನು. ಪುನಃ ಏಳಲು ಪ್ರಯತ್ನಿಸಿದನು ಲಕ್ಷ್ಮಣರಾಯರು ಪ್ರೇಮದಿಂದ "ಕಂದಾ ಏಳಲು ಪ್ರಯತ್ನಿಸಬೇಡಪ್ಪಾ, ಹೆಚ್ಚಿಗೆ ಶ್ರಮವಾಗುತ್ತದೆ."

ತಂದೆಯನ್ನು ಕುರಿತು "ಅಪ್ಪಾ! ನನ್ನ ಮುಖವನ್ನು ನೋಡಿ ನೋಡಿ ನೀನೇಕೆ ಹೀಗೆ ಅಳುತ್ತಿರುವೆ."

"ಕಂದಾ-ಕಂದಾ ನನ್ನನ್ನು ಬಿಟ್ಟು ಹೊರಡುತ್ತೀಯಾ—ನಿನ್ನನ್ನು ಹಿಂಸಿಸಲು ಅವಕಾಶ ಕೊಟ್ಟ ಈ ಪಾಪಿಗೆ ಹೀಗೆ ಶಿಕ್ಷೆ ವಿಧಿಸುತ್ತೀಯಾ—ಪುಟ್ಟೂ ಕ್ಷಮಿಸು. ನನ್ನನ್ನು ಮನ್ನಿಸು.—"

ಈ ಉದ್ವೇಗವು ಪುಟ್ಟುವಿನ ಕೃಶ ಹೃದಯಕ್ಕೆ ಸಿಡಿಲುಬಡಿದಂತಾಯಿತು. ತಂದೆಯ ಕೈಗಳನ್ನು ಅಪ್ಪಿ ಪುನಃ ಪುನಃ ಚುಂಬಿಸುತ್ತಾ ಕಣ್ಣಿಗೆ ಒತ್ತಿಕೊಳ್ಳುತ್ತ—

"ಅಕ್ಕನನ್ನೂ ಅಮ್ಮನನ್ನೂ ನೋಡಲು ನನ್ನೊಂದಿಗೆ ನೀನು ಬರ್ರ

ವುದಿಲ್ಲವೇನಪ್ಪಾ! ಒಬ್ಬನೇ ಹೋಗಲು ನನಗೆ ಹೆದರಿಕೆಯಾಗುತ್ತದೆ, ನೀನೂ ಬಾಪ್ಪ!" ಎಂದು ಅತಿ ಶ್ರಮೆಯಿಂದ ಒಂದೊಂದೇ ಮಾತುಗಳನ್ನಾಡುತ್ತಾ ಮಾತು ಮುಗಿದೊಡನೆಯೇ ಮಿಂಚಿನಂತೆ ಎದ್ದು ಕುಳಿತು "ಅಗೋ! ಅಗೋ! ಅವಳು! ಅಕ್ಕ! ಅಕ್ಕ! ಅಕ್ಕನು ಬಂದಿರುವಳು! ಅಲ್ಲಿನೋಡಪ್ಪಾ! ಅಮ್ಮನನ್ನು ತೋರಿಸುತ್ತೇನೆಂದು ನನ್ನನ್ನು ಕರೆಯುತ್ತಿರುವಳು! ಅಕ್ಕನ ಎದೆಯಿಂದ ರಕ್ತ ಬರುತ್ತಿದೆ ನೋಡಪ್ಪಾ! ಯಾರೋ ಅವಳನ್ನು ಹೊಡೆದಿರುವರು! ಎದೆಯನ್ನು ಒರೆಸುತ್ತಾ "ಅಯ್ಯೋ ಸಮಾಜವೇ" ಎಂದನ್ನುತ್ತಿರುವಳಪ್ಪ! ಸಮಾಜ ಹೊಡೆಯಿತಂತೆ! ಅಕ್ಕನನ್ನು ನಾನು ಸಂತೈಸುತ್ತೇನಪ್ಪಾ! ಇಗೋ! ಹೊರಟೆ! ನೀನೂ ಜೊತೆಯಲ್ಲಿ ಬಾಪ್ಪ! ಹೊರಟೆ! ಹೊರಟೆ! ಎಂದನ್ನುತ್ತಾ ಮಂಚದಿಂದುರುಳಿದನು!

ಪುನಃ ಏಳಲಿಲ್ಲ!!!

---

# ಕಂದ.



ಕಂದನೇ ಅವನ ಜೀವನ ಸರ್ವಸ್ವ. ಕಂದನೇ ಅವನಿಗೆ ಸಕಲವೂ. ಕಂದನಿಗಾಗಿಯೇ ಪಾಪಭರಿತವಾದ ಈ ಜಗತ್ತಿನಲ್ಲಿ ಅವನಿನ್ನೂ ಜೀವಿಸಿದ್ದುದು. ಧನಕನಕಗಳ ಮೇಲೆ ಅವನಿಗಾಸೆಯಿಲ್ಲ; ವ್ಯಕ್ತಿಗಳ ಮೇಲೆ ಅವನಿಗಭಿಮಾನವಿಲ್ಲ. ಆದರೆ ಯಾವವ್ಯಕ್ತಿಗೂ ಅವನು ಕೇಡನ್ನು ಬಯಸನು. ತನ್ನ ಕೈಯಲ್ಲಾಗುವ ಸಹಾಯವನ್ನು ಮಾಡಲು ಯಾವಕಾಲದಲ್ಲಿಯೂ ಅವನು ಹಿಂಜರಿದವನೇ ಅಲ್ಲ. ಅವನ ಗುಣವು ಹಳ್ಳಿಯವರನ್ನೆಲ್ಲಾ ಮಾಟಗೊಳಿಸಿತ್ತು. ಅವನಾರು? ಅವನು ಕಂದನ ತಂದೆ. ಕಂದನಿಗೆ ಬೇರೆಯಾವ ಹೆಸರೂ ಇಲ್ಲ. ಕಂದನ ತಂದೆಗೆ ನಾಮಾವಳಿಯಲ್ಲಿ ನಂಬಿಕೆಯಿಲ್ಲ. ಕಂದನು ಸುಂದರ. ಕಂದನ ಆಟ, ನಗೆ ನೋಟಗಳು ಎಲ್ಲರನ್ನೂ ಮಾಟಗೊಳಿಸಿದ್ದವು. ಕಂದನ ಒಂದು ಮುಗುಳ್ನಗೆಯು ಹಳ್ಳಿಯವರ ದುಃಖಗಳೆಲ್ಲವನ್ನೂ ನಿಶ್ಶೇಷವಾಗಿ ನಿವಾರಿಸುತ್ತಲಿತ್ತು. ಆ ಹಳ್ಳಿಯಲ್ಲಿ ಕಲಹಗಳು ತಲೆದೋರಿದರೆ ಅವರು ಪಟ್ಟಣವಾಸಿಗಳ ಹಾಗೆ ನ್ಯಾಯಸ್ಥಾನಗಳಿಗೆ ಹೋಗುತ್ತಿರಲಿಲ್ಲ. ಕಂದನ ಬಳಿಗೆ ಹೋಗುತ್ತಿದ್ದರು. ಕಂದನ ಒಂದು ತೊಟ್ಟು ಕಣ್ಣೀರು ಅವರ ಕಲಹಗಳನ್ನು ಶಮನಗೊಳಿಸಿ ಶಾಂತತೆಯನ್ನು ನೆಲೆಗೊಳಿಸುತ್ತಲಿತ್ತು. ಕಂದನೊಂದು ಚುಂಬನವು ರೋಗಿಯನ್ನು ನಿರೋಗಿಯನ್ನಾಗಿಸುತ್ತಿತ್ತು. ಇಂತಹ ಕಂದನು ಜಗದ ಸೇವೆಗಾಗಿ ಕನ್ನಡ ನಾಡಿನಲ್ಲಿ ತನ್ನ ತಂದೆಯನ್ನಿರಿಸಿದುದೊಂದು ಹೆಚ್ಚಿನ ಸಂಗತಿಯೇ?

ಕಂದನು ಒಂದು ಶಿಶು. ವಯಸ್ಸು ಐದಿರಬಹುದು. ಜನನ ಕೊಟ್ಟ ಕೆಲವು ದಿವಸಗಳಲ್ಲಿಯೇ ತಾಯಿಯು ಅಪಗಮಳಾದಳು. ಕಂದನ ತಂದೆಯೇ ಅದರ ತಾಯಿ, ಅವನೇ ಅದರ ತಂದೆ. ಕಂದನ ತಂದೆಯನ್ನು ಪ್ರೇಮಪುತ್ರರಾದ ಆ ಹಳ್ಳಿಯವರು ಅನಾಥಬಂಧುವೆಂದು ಕರೆಯುತ್ತಿದ್ದರು. ಅವರಿಗೆ ಆವನ ನಿಜವಾದ ಹೆಸರು ಸೇರದು. ಮೈಸೂರು, ಬೆಂಗಳೂರು ಮಧ್ಯೆಯಿರುವ 'ಈಶಪುರ'ವೇ ಅನಾಥ ಬಂಧುವಿನ ಆವಾಸ

ಕ್ಷೇತ್ರ. ವೈದ್ಯಕೀ ವೃತ್ತಿಯನ್ನು ಮಾಡುತ್ತಾ ಸಕಲರಲ್ಲಿಯೂ ಒಂದೇ ರೀತಿಯಾಗಿ ವರ್ತಿಸುತ್ತಾ ಎಲ್ಲರ ಪ್ರೀತಿಯನ್ನೂ ಸಂಪಾದಿಸಿದ್ದನು. ಮನೆಗೆ ಇಷ್ಟಿಷ್ಟೆಂದು ನಿಗದಿಯಾಗಿ ಸುಗ್ಗಿಯ ವೇಳೆಯಲ್ಲಿ ದವಸವನ್ನು ಹಳ್ಳಿಯರವನಿಗೆ ಕೊಡುತ್ತಿದ್ದರು. ನೆಯಿಗೆಯುವರು ವಸ್ತ್ರಗಳನ್ನು ಕೊಡುತ್ತಿದ್ದರು. ಅನಾಥಬಂಧುವು ತನಗೂ ತನ್ನ ಕಂದನಿಗೂ ಎಷ್ಟುಬೇಕೋ ಅಷ್ಟನ್ನು ಮಾತ್ರ ಸ್ವೀಕರಿಸುತ್ತಿದ್ದನಲ್ಲದೆ, ಅದರಮೇಲೆ ಒಂದಣುವಷ್ಟನ್ನು ಕೂಡ ಸ್ವೀಕರಿಸನು. ಅವನ ಆಸೆಯು ಅತ್ಯಲ್ಪ; ದಾನವು ಅಪರಿಮಿತ. ಹಳ್ಳಿಯಲ್ಲಿ ಎಲ್ಲರಿಗೂ ಭಾತೃಪ್ರಾಯನು. ಬಾಲಕ ಬಾಲಕಿಯರು ಸಂಜೆಯ ವೇಳೆಯಲ್ಲಿ ಸುತ್ತುಗೂಡಿ ಮೃದು ಮನೋಹರವಾದ ಕಥೆ ಗೀತೆಗಳನ್ನು ಕೇಳಲು ಬರುತ್ತಿದ್ದರು. ತರುಣ ತರುಣಿಯರು ತಮ್ಮ ಮನದಂಡಲೆಗಳನ್ನುಸುರಿ ನಿವೃತ್ತಿಮಾರ್ಗವನ್ನರಿಯಲು ಬರುತ್ತಿದ್ದರು. ಪ್ರತಿಯೊಬ್ಬನೂ, ಪ್ರತಿಯೊಬ್ಬಳೂ ಒಂದೊಂದು ಕಾರಣಗಳಿಂದ ಅನಾಥ ಬಂಧುವಿನ ನಿಲಯಕ್ಕೆ ಬರುತ್ತಿದ್ದರು. ಪ್ರೇಮ ಸಾಮ್ರಾಜ್ಯವೆಂದರೆ ಅನಾಥಬಂಧುವಿನ ನಿಲಯ. ಅಲ್ಲಿ ಸ್ಪೃಶ್ಯಾಸ್ಪೃಶ್ಯತೆಗಳ ಹಾವಳಿ ಇರಲಿಲ್ಲ. ಬ್ರಾಹ್ಮಣ ಬ್ರಾಹ್ಮಣೇತರರ, ಹಿಂದೂ ಮುಸಲ್ಮಾನರ ಭಯೋತ್ಪಾದಕ ವೈಷಮ್ಯಗಳ ಗೊಂದಲವಿರಲಿಲ್ಲ; ಸವತಿಯಿಂದ ನೊಂದ ಸತಿಯ, ಅತ್ತೆಯಿಂದ ನೊಂದ ಸೊಸೆಯ, ಅಣ್ಣನಿಂದ ನೊಂದ ತಮ್ಮನ ಕಂಬನಿಗಳ ಕಲೆಗಳಿರಲಿಲ್ಲ ಎಲ್ಲಾ ಆನಂದ—ಎಲ್ಲವೂ ಆನಂದಮಯವೇ ಆಗಿದ್ದಿತು. ಅನಾಥಬಂಧುವಿನ ಮುಖದಲ್ಲಿ ದುಃಖ, ನೋವು ಇವುಗಳನ್ನು ಕಂಡವರೇ ಇರಲಿಲ್ಲ. ಬೆಳಗಾಯಿತೆಂದರೆ ಶ್ರೀಹರಿಯನ್ನು ಸ್ತುತಿಸುತ್ತೆದ್ದು, ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಮಧ್ಯಾಹ್ನಕ್ಕೆ ಪಾಕವನ್ನು ಸಿದ್ಧಪಡಿಸಿ, ಕಂದನಿಗೆ ಸ್ವಲ್ಪ ಹಾಲುಕೊಟ್ಟು ಜೊತೆಯಲ್ಲಿ ಕರೆದುಕೊಂಡು, ಜನಸೇವೆಗಾಗಿ ಗಿಡಮೂಲಿಕೆಗಳನ್ನರಸುತ್ತ ಹೋಗುವುದೇ ಅವನ ನಿತ್ಯವಿಧಿ. ತಂದೆಯು ಗಿಡಮೂಲಿಕೆಗಳನ್ನು ಹುಡುಕುತ್ತಿದ್ದರೆ ಕಂದನೊಂದುಕಡೆ ಕುಳಿತು ಆಡುತ್ತಲಿರುತ್ತಿತ್ತು. ನಿಸರ್ಗಮಾತೆಯ ಪ್ರೌಢ ಸೃಷ್ಟಿಕಾರ್ಯದ ಸೊಬಗನ್ನು ನೋಡಿ ಹಿಗ್ಗುತ್ತಲಿತ್ತು. ಹಸುರೆಲೆ, ಸುಳಿಗಾಳಿ, ಘನತರದ ಪುಷ್ಪಗಳ ಮೇಲೆ ಬೀಸಿ ಬರುತ್ತಿದ್ದ ನರು ಇವುಗಳಮಧ್ಯೆ ಬೆಳೆಯುತ್ತಿತ್ತು.

ವೀಥಿಯಲ್ಲಿ ಎತ್ತಿನ ಭಂಡಿಯಾಗಲೀ, ಮೋಟಾರು ಗಾಡಿಯಾಗಲೀ ಹೋಗುತ್ತಿದ್ದರೆ ಅದನ್ನು ಕಂಡು ನಗುತ್ತ ಕೇಕೆಹಾಕಿಕೊಂಡು ಕುಣಿಯುತ್ತಲಿತ್ತು. ಆ ರಸ್ತೆಯಲ್ಲಿ ಮೋಟಾರಿನ ಪ್ರಯಾಣಿಕರಿಗೇನೂ ಕಡಿಮೆಯಿರಲಿಲ್ಲ. ಆದರವುಗಳ ಸವಾರರ ಮನೋಭಾವಗಳು ಮಾತ್ರ ಒಂದೇ ರೀತಿಯಾಗಿರುತ್ತಿರಲಿಲ್ಲ.

ಕಂದನೊಂದು ದಿನ ಬಾಲಬುದ್ಧಿಯಿಂದ ವೀಥಿಯಲ್ಲಾಡುತ್ತಿತ್ತು. ಒಂದು ಹಸನಾದ ಮೋಟಾರು ಭಂಡಿ. ಅದರ ಧಣಿಯೇ ಆನಂದದಿಂದ ನಡೆಸಿಕೊಂಡು ಬರುತ್ತಿದ್ದಾನೆ. ಎಂತಹ ವಿನೋದಕರವಾದ ಕಾಲಸ್ಥಿತಿ. ಗಾಡಿ ಹೊಡೆಯತಕ್ಕವನು ಆನಂದದಿಂದ ಕಾಲುಮೇಲೆ ಕಾಲುಹಾಕಿಕೊಂಡು ಹಿಂದೆ ಕುಳಿತಿರುವುದು, ಯಜಮಾನನು ಗಾಡಿಯನ್ನು ನಡಿಸುವುದು !! ಇಹಲೋಕದಲ್ಲಿ ನಾಗರೀಕತೆಯು ಹೆಚ್ಚುತ್ತಾ ತಲೆಕೆಳಗಿನ ವ್ಯಾಪಾರಗಳ ಪಟ್ಟಿಯೂ ಹೆಚ್ಚುತ್ತದೆ. ಯಜಮಾನನು ಮೋಟಾರು ನಡೆಸುವುದನ್ನು ಹೊಸದಾಗಿ ಕಲಿತಿದ್ದಂತೆ ಕಾಣುತ್ತದೆ. ಮೈಮೇಲೆ ಸ್ಮರಣೆಯೇ ಇಲ್ಲದಂತಹ ಆನಂದ. ಅತುಲವೇಗದಿಂದ, ಮಹಾ ರಭಸದಿಂದ, ಅಶಾಂತ ಸಮುದ್ರದ ಮಹಾ ಅಲೆಯಂತೆ ಭೋರ್ಗರೆಯುತ್ತಾ ಮೋಟಾರು ಬರುತ್ತಿದ್ದಿತು. ಕಂದನು ಅಲ್ಲಿ ಆಡುತ್ತಿದ್ದಿತು—ಆ ಕೃತ್ರಿಮ ಚತುಷ್ಪಾದ ಜಂತುವು ನಿರಾಯಾಸವಾಗಿ ಕಂದನಮೇಲೆ ಹರಿದುಹೋಯಿತು—ದಾರಿಯಲ್ಲಿ ಹೋಗುತ್ತಾ ನಿರಪರಾಧಿಗಳಾದ ಇರುವೆಗಳ ಗೂಡಿನಮೇಲೆ ನಾವು ಕಾಲನ್ನಿಡುತ್ತೇವೆ. ಅವುಗಳ ಸಂಕಟವು ನಮಗೆ ತಿಳಿಯಬರುವುದೇ ?—ಹಕ್ಕಿಗಳನ್ನು ನಮ್ಮ ನಿಂದಾರ್ಹ ವಿನೋದಕ್ಕಾಗಿ ಕಲ್ಲುಗಳಿಂದ ಹೊಡೆದು ನೋಯಿಸುತ್ತೇವೆ. ಅವುಗಳ ಮತ್ತು ಅವುಗಳಿಗೆ ಜೀವವಿತ್ತವನ ಮನದಂಡಲೆಯು ನಮಗೆ ತಿಳಿಯಬರುವುದೇ ?—ನಾಗರಿಕತೆಗೆ ಪುಷ್ಟಿ ದೊರಕುತ್ತಾ ಜನತೆಗೆ ಜನತೆಯ ಮೇಲಿನ ವಿಶ್ವಾಸವು ಕಡಿಮೆಯಾಗುವುದೆಂಬುದು ಹುಸಿಯಲ್ಲ.

ಸಮೀಪದಲ್ಲಿ ಮೂಲಿಕೆಗಳನ್ನಾರಿಸುತ್ತಿದ್ದ ಬಂಧುವಿಗೆ ಇದು ಕಾಣಬಂದಿತು. ಹಾ ! ಹಾ ! ದೇಹದಲ್ಲಿನ ಶಕ್ತಿಯು ಉಡುಗಿತು; ಮಾತನಾಡಲು ನಾಲಿಗೆಯು ಸೇದಿಹೋದಂತಾಯಿತು. ಬರುತ್ತಿದ್ದ ಕಂಬನಿಯ

ಧಾರೆಯನ್ನು ಒತ್ತಿ ಹಿಡಿದನು. ಪುಷ್ಪಮೂಲಿಕಾದಿಗಳಿಂದ ತುಂಬಿದ್ದ ತನ್ನ ಬುಟ್ಟಿಯಲ್ಲಿ ಕಂದನ ಕಳೇಬರವನ್ನಿಟ್ಟು ಪುಷ್ಪಗಳಿಂದಲೇ ಅದನ್ನು ಮುಚ್ಚಿ ಉನ್ಮಾದನಂತೆ ಮೋಟಾರಿನ ಹಾದಿ ಹಿಡಿದು ಹೊರಟನು.— ದೇವಾ! ನಿರಪರಾಧಿ ಕಂದನೂ ನಿನ್ನ ಶತ್ರುವೇ? ಅಥವಾ ಏಸುವೆಂದಂತೆ ಮಕ್ಕಳ ಮೇಲಣ ಅನ್ಯಾದೃಶ್ಯ ಪ್ರೇಮದಿಂದ ಅವುಗಳನ್ನೆಮ್ಮಿಂದ ಸೆಳೆದೊಯ್ಯುವಿಯೋ??

೨

ಮೋಟಾರಿನ ವ್ಯಕ್ತಿಯು ಆ ವೇಳೆಗೆ ಬಹಳ ದಣಿದಿದ್ದುದರಿಂದ ಹತ್ತಿರದ್ದ ಹಳ್ಳಿಯ ಬಳಿ ತನ್ನ ವಾಹನವನ್ನು ನಿಲ್ಲಿಸಿ ಆಯಾಸ ಶಮನಕ್ಕಾಗಿ ಸ್ವಲ್ಪ ಹಾಲನ್ನು ವಿಚಾರಿಸುತ್ತಿದ್ದನು. ಎಷ್ಟಾದರೂ ಹಳ್ಳಿಯವರು, ಪೇಟೆಯವರಿಗಿಂತಲೂ ದಯಾಶೀಲರು. ಹಾಲು ದೊರಕಿತು, ಜೊತೆಗೆ ಹಣ್ಣುಗಳೂ ಬಂದುವು, ಹಣ್ಣುಗಳೊಂದಿಗೆ ಸಕ್ಕರೆಯೂ ಇದ್ದಿತು. ಯಜಮಾನನು ಆನಂದದಿಂದ ಇವುಗಳನ್ನು ಮೆಲ್ಲುತ್ತಾ ಕುಳಿತಿದ್ದನು. ಈ ವೇಳೆಗೆ ಉನ್ಮಾದನಂತಾಗಿ ಒಂದುಕೈಯಲ್ಲಿ ಪುಷ್ಪದ ಬುಟ್ಟಿಯನ್ನೂ, ಮತ್ತೊಂದು ಕೈಯಲ್ಲಿ ಹುಲ್ಲುಕುಯ್ಯುವ ಕುಡುಗೋಲನ್ನೂ ಪಿಡಿದಿದ್ದ ಅನಾಥಬಂಧುವು ಬಂದನು. ಎಂದಿನಂತೆ "ತಾತ-ತಾತ" ಎಂದು ಹಳ್ಳಿಯವರೆಲ್ಲರೂ ಸಲಿಗೆಯಿಂದ ಸುತ್ತ ಮುತ್ತಿದರು. ಇಂದು ತಾತನು ನಿರುತ್ತರನು. ಎಲ್ಲರಿಗೂ ಮಹದಾಶ್ಚರ್ಯ!! ಎಂದೂ ಇಲ್ಲದ ತಾತನ ಮುಖವು ಇಂದೇಕೆ ಕಳೆಗುಂದಿದೆ. ಜೀವಶವದಂತೇಕಾಗಿರುವನು ತಾತ?

ಫಲಭಕ್ಷಣಾನಂದವನ್ನು ಪಡೆಯುತ್ತಿದ್ದ ಯಜಮಾನನ ಬಳಿಗೆ ಅನಾಥಬಂಧುವು ಬಂದು—

"ಸ್ವಾಮಿಾ, ಸ್ವಲ್ಪಕಾಲದ ಹಿಂದೆ ಈ ಮಾರ್ಗವಾಗಿ ಒಂದು ಹೊಸ ಮೋಟರಿನಲ್ಲಿ ಬಂದವರು ತಾವೇನೋ?"

"ಆಹುದು, ನಾನೇ ಬಂದವನು!"

"ಮಾರ್ಗದಲ್ಲಿ ಅಡ್ಡವಾಗಿ ತಮಗೇನಾದರೂ ಸಿಕ್ಕಿತೋ?"

"ಹೌದು, ಏನೋ ಒರಟಾದ ಒಂದು ವಸ್ತುವು ಅಡ್ಡವಾಗಿ ಬಂದಹಾಗಿತ್ತು. ಆಗ ನನ್ನ ಮೋಟಾರು ಮೇಲಕ್ಕೆ ಸ್ವಲ್ಪಹಾರಿತು—ಊ! ಏನು

ಬಂದರೇನು ? ಭೀಮಬಲ, ವಾಯುವೇಗದ ಈ ರಥಕ್ಕೆ ಎದುರೇ ?"

"ಸ್ವಾಮಿ, ಆ ಒರಟಾದ ವಸ್ತುವೇನೆಂದು ನೋಡಲು ನಿಮಗೆ ಕುತೂಹಲವಾಗಲಿಲ್ಲವೇ ?"

"ಅಯ್ಯಾ, ಇಂತಹ ಸಣ್ಣ ಪುಟ್ಟ ವಿಷಯಗಳಲ್ಲಿ ನನಗೆ ಕುತೂಹಲ ವಿಲ್ಲ—ತಿಳಿಯಿತೋ ?"

"ಸ್ವಾಮಿ, ಆ ವಸ್ತುವು ಜೀವವುಳ್ಳದ್ದಾಗಿರಬಹುದು. ಬಹುಶಃ ಒಂದು ಕರುವಿರಬಹುದು—ಒಂದು ನಾಯಿ ಇರಬಹುದು—"

"ಜೀವಿತದ್ದಾದರೇನು, ನಿರ್ಜೀವಿತದ್ದಾದರೇನು. ನನಗೇನ ಹೋಗಯ್ಯಾ—ನಮ್ಮ ಮಾರ್ಗದಲ್ಲಿ ಬರುವ ಪದಾರ್ಥಗಳೂ, ಕಂಟಕ ಗಳೂ ಎಲ್ಲವೂ ನಶಿಸಲೇಬೇಕು."

ಅನಾಥ ಬಂಧುವಿನ ಬಾಯಿಯಿಂದ ಹೆಚ್ಚು ಮಾತು ಹೊರಡಲಿಲ್ಲ. ಮಿಂಚಿನ ವೇಗವು ಹೊರಬಿದ್ದಿತು ! ಕ್ಷಾತ್ರತೇಜವು ಹೊರಕಾಣಿಸಿತು. ಮಿನುಗುತ್ತಿದ್ದ ಕುಡುಗೋಲೊಂದು ಪಥಿಕನ ಶಿರವನ್ನು ಭೇದಿಸಿತು ಜನಗೊಂದಲವು ವೊದಲಾಯಿತು. ನಗರ ರಕ್ಷಕರು ಬರಲಾರಂಭಿಸಿದರು. ನಗರ ರಕ್ಷಕರಿಗೇ ಪರಮಾಶ್ಚರ್ಯ. ಪ್ರೇಮಮೂರ್ತಿಯೊಂದು ಪಾಪಭರಿ ತವೂ ನೀಚವೂ ಆದೀಕೆಲಸವನ್ನು ಮಾಡಿತೆ ? ನಂಬಲನರ್ಹವಾದ ಸುದ್ದಿ ಯಾಗಿತ್ತು. ಆದರೆ ನಿಯಮಗಳಿಗೆ ಕಟ್ಟುಬಿದ್ದಿದ್ದ ನಗರ ರಕ್ಷಕರು ಕುಂದಿ ಕಂದಿದ ಮುಖದಿಂದ ಬಂಧುವಿಗೆ ಬಂಧನದ ಬಳೆಗಳನ್ನು ತೊಡಿಸಿ ದರು. ಊರಿನವರೆಲ್ಲರೂ ಕಂಗೆಟ್ಟರು. ಬಸವಳಿದು ಬೆಂಡಾದರು. ಆರ್ತ ಧ್ವನಿಯಿಂದ ಎಲ್ಲರೂ ಗೋಳಿಟ್ಟರು.

ಬಂಧುವು ತನ್ನ ಬುಟ್ಟಿಯನ್ನು ಬೇಡಿದನು. ಆ ಬೇಡಿಕೆಯನ್ನು ನಿರಾಕರಿಸಲು ಯಾರಿಗೆ ಧೈರ್ಯ ಬಂದೀತು, ಮನಸ್ಸೊಪ್ಪೀತು ? ಬುಟ್ಟಿ ಯಿಂದ ಒಂದು ಘನ ಕುಸುಮಮನ್ನೆತ್ತಿ ಅಪ್ಪಿ ಚುಂಬಿಸಿ "ಕಂದಾ, ನನ್ನ ಜೀವಿತದ ಸರ್ವಸ್ವಾ ! ಕ್ರೂರತನದಿಂದ ನಿನ್ನ ಒಡನಾಡಿಯಾದ ನನ್ನ ನ್ನು ಬಿಟ್ಟು ಹೋದೆ. ನಾನು ನಿನ್ನಂತೆ ಕಠಿಣಾತ್ಮನಲ್ಲ. ಇದೋ, ನಿನ್ನೊ ಡೆಗೆ ಬರುವೆನು." ಎಂದು ಹೇಳಿ ಚೈತನ್ಯ ಶೂನ್ಯನಾಗಿ ಬಿದ್ದುಬಿಟ್ಟನು. ಬಂಧನದ ಸಂಕೋಲೆಗಳು ಕಳಚಲ್ಪಟ್ಟವು.

“ ಕಂದಾ, ನಮ್ಮ ಅಕ್ಕರೆಯ ಅಯ್ಯನನ್ನು ಕರೆದೊಯ್ದು. ನಮ್ಮೆಲ್ಲರನ್ನೂ ಅನಾಥರನ್ನಾಗಿಸಿದೆಯಾ ” ಎಂಬೊಂದು ಮೊರೆಯು ಮಾತ್ರ ಆ ಪ್ರದೇಶವನ್ನೆಲ್ಲಾ ಆವರಿಸಿತು.